## ಈ ಸಂಚಿಕೆಯಲ್ಲಿ



ಇವಲ್ಲದೆ ಒಗಟು, ಪದ್ಯ, ಚುಟಿಕ ಮುಂತಾದುವುಗಳನೇಕ.

## ತೆರೆಯ ಮೇಲೆ ಬರಲಿದೆ

ನಾರಾಯಣರಾವು, ಕೃಷ್ಣಕುಮಾರಿ, ಸೂರ್ಯಶ್ರೀ, ಮೇದೂರಿ ಮುಂತಾದ ನಿಮ್ಮ ಅಚ್ಚು ಮೆಚ್ಚಿನ ನಟನಟಿಯರು ಅಭಿನಯಿಸಿರುವ

ಜಾಗೃತಿಯವರ

# ಕಾಪುರಂ

[ತೆಲುಗು ಸಾಮಾಜಿಕ ಚಿತ್ರ]



ಇಂದಿನ ಸ್ತ್ರೀ ಸಮಾಜವನ್ನು ಎತ್ತಿ ತೋರಿಸುವ ಅತ್ಯುತ್ತಮ ಚಿತ್ರ

ನಿರ್ದೇಶನ: ಭಗವಾನ್ ಸ್ಟೂಡಿಯೋ: ಜಾಗೃತಿ - ಬೊಂಬಾಯಿ



ಆಂಧ್ರ, ರಾಯಲಸೀಮ ಹಂಚಿಕೆ :

ರಾಧಾಕೃಷ್ಣ ಫಿಲಿಂಸ್ :: ರಾಜಮಹೇಂದ್ರಿ

ವಿವರಗಳಿಗೆ:

## ಜಾಗೃತಿ ಪಿಕ್ಚರ್ಸ್

ಮೇನ್ ರೋಡ್ — ದಾದರ್ — ಬಾಂಬೆ - 14

ಸ್ಟಾರ್ ಆಫ್ ಇಂಡಿಯಾ ಪೆನ್ಸಿಲ್‌ಗಳಿಗೆ

ದಿ ಮದ್ರಾಸ್ ಪೆನ್ಸಿಲ್ ಫ್ಯಾಕ್ಟರಿಯವರೊಡನೆ,



ಲಿಥೊ ಮತ್ತು ಅತ್ಯುತ್ತಮ ತರಹೆಯ ಮುದ್ರಣಗಳಿಗೆ

# ಹೊ ಅಂಡ್ ಕಂಪೆನಿ

ಯವರೊಡನೆ



ಮತ್ತು ಎಲ್ಲಾ ತರಹೆಯ ಸ್ಟೇಷನರಿ ಸಾಮಾನುಗಳಿಗೆ

ವಿ. ಪೆರುಮಾಳ್ ಚೆಟ್ಟಿ ಅಂಡ್ ಸನ್ಸ್

ಯವರೊಡನೆಯೂ ವ್ಯವಹರಿಸಿರಿ

---

# ವಿ. ಪೆರುಮಾಳ್ ಚೆಟ್ಟಿ & ಸನ್ಸ್

**3, ಸ್ಪಿಂಗರ್ಸ್ ಸ್ಟ್ರೀಟ್, :: ಮದ್ರಾಸು - 1.**

# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ



ಬೆಂಜಮಿನ್ ಫ್ರಾಂಕ್ಲಿನ್ ಚಿಕ್ಕಂದಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗ ಒಂದು ವಿಚಿತ್ರವಾದ ಅನುಭವವುಂಟಾಯಿತು. ಮನೆಯಿಂದ ಶಾಲೆಗೆ ಹೋಗುವದಾರಿಯಲ್ಲಿ ಒಬ್ಬ ಕುಂಬಾರನ ಕುಲುಮೆಯಿತ್ತು. ಆ ಕುಲುಮೆಯನ್ನು ನೋಡುತ್ತಾ ಶಾಲೆಯ ಮಾತನ್ನೇ ಮರೆತು, ಅಲ್ಲಿಯೇ ನಿಂತುಬಿಟ್ಟ. ಕುಲುಮೆಯ ಯಜಮಾನನು ಇದನ್ನು ಗ್ರಹಿಸಿ, ಹುಡುಗನನ್ನು ಪುಸಲಾವಣೆ ಮಾಡಿ, ಹೊಗಳಲಾರಂಭಿಸಿದ. ಹುಡುಗ ಉಬ್ಬಿಹೋದ. ಕ್ರಮೇಣ ಯಜಮಾನ ಹುಡುಗನೊಂದಿಗೆ ಸವಿ ಮಾತುಗಳನ್ನಾಡಿ, ಕುಲುಮೆಗೆ ತಿದಿ ಒತ್ತಿಸಿಕೊಳ್ಳಹತ್ತಿದ. ಶಾಲೆಗೆ 'ಚಕ್ಕರ್', ಕೊಟ್ಟು ದಿನಾ ಕುಲುಮೆ ಒತ್ತುತ್ತಾ ಇರಲು ಬೆಂಜಮಿನ್ನಿನವ್ಯಾಸಂಗ ಮೂಲೆ ಪಾಲಾಯಿತು. ಕೆಲಕಾಲವಾದಮೇಲೆ ಅತನು ತನ್ನ ತಪ್ಪ ಅರಿತು, ಪ್ರಶಂಸೆಗೆ ಮಾರುಹೋಗಕೂಡದೆಂದು ನಿಶ್ಚಯಿಸಿಕೊಂಡ. ಅಂದಿನಿಂದ ಯಾರಾದರೂ ತನ್ನನ್ನು ಹೊಗಳಿದರೆ 'ಏಕೆ ಹೊಗಳುತ್ತಿದ್ದಾನೆ?' ಎಂದು ತನ್ನಲ್ಲೇ ಪ್ರಶ್ನೆ ಮಾಡಿಕೊಳ್ಳುವನು. ಈ ಕುಲುಮೆಯ ಸಂಘಟನೆ ಬೆಂಜಮಿನ್ನಿಗೆ ಒಂದು ದೊಡ್ಡ ಪಾಠಕಲಿಸಿತು. ಬೆಂಜಮಿನ್ನಿನಂತಹ ಮಹಾಪುರುಷನೇ ಗುಣಪಾಠವಾಗಿ ಎಣಿಸಿದ, ಈಘಟನೆ ನಮಗೆಮಾತ್ರ ಮಾರ್ಗದರ್ಶಕವಾಗುವುದಿಲ್ಲವೇ? ಇಂತಹ ವಿಷಯಗಳನ್ನು ತಿಳಿದುಕೊಂಡಾಗಲೇ ನಮ್ಮ ಜೀವನವು ಜಯಪ್ರದವಾಗುವುದು. ಈ ಉದ್ದೇಶದಿಂದಲೇ 'ಹಿರಿಯರಸಣ್ಣತನ' ಎಂಬ ಶೀರ್ಷಿಕೆಯನ್ನು ಈ ತಿಂಗಳಿಂದ ಪ್ರಾರಂಭಿಸಿದ್ದೇವೆ.

ಸಂಪುಟ ೭ :: ಆಗಸ್ಟು '೫೧ :: ಸಂಚಿಕೆ ೨




# ಕೈಲಾಗದ ಕೆಲಸ

ಒಂದೂರಿನಲ್ಲಿ ಗಂಡ ಹೆಂಡಿರಿದ್ದರು
ಬಹು ಅನ್ಯೋನ್ಯವಾಗಿದ್ದರವರು.
ಒಂದು ದಿನ ಬಂತು ಅವರಿಬ್ಬರಲ್ಲಿ ತಗಾದೆ
ಯಾರ ಕೆಲಸ ಕಷ್ಟವೆಂದು.

ಗಂಡನೆಂದ 'ನೀನೇನು ಮಾಡುವೆ
ಹಗಲೆಲ್ಲ ನೀ ಸುಮ್ಮನಿರುವೆ
ಮೂರು ದಿನದಲ್ಲಿ ನೀ ಮಾಡುವ ಕೆಲಸವ
ನಾನೊಂದು ಹೊತ್ತಿನಲ್ಲೇ ಮಾಡಿಮುಗಿಸುವೆ'

ಹೆಂಡತಿ ಹೇಳಿದಳು 'ಓಹೋ, ಹಾಗೆಯೋ,
ಹಾಗಾದರೆ ನಾಳಿಂದ ನೀವೇ ಮಾಡಿ
ನಾ ಹೋಗಿ ಹೊಲದ ಕೆಲಸ ಮಾಡಿಬರುವೆ
ಯಾರ ಕೆಲಸ ಸುಲಭವೋ ನೋಡುವ'

ಮರು ದಿನ ಹೆಂಡತಿ ಹೊಲಕೆ ಹೋದಳು
ಗಂಡನಿಗೆ ಮನೆಯ ಕೆಲಸ ಹೇಳಿ ಪೋದಳು
ಹಸುಗಳ ಕೆಚ್ಚಲಿಂದ ಹಾಲು ಕರೆಯಬೇಕು
ತರುವಾಯ ಕುಳಿತು ಅಡಿಗೆ ಮಾಡಬೇಕು

ಹಾಲು ಕರೆಯಲು ಗಂಡ ಹೋದನು
ಹಾಲು ಕರೆದರಿಯ ಎಂದೂ ಆತನು
ಹೊಸಬನನ್ನು ಕಂಡು ಹಸು ಬೆದರಿತು
ಮುಖ ಮುರಿಯುವಂತೆ ಅದು ಒದೆಯಿತು.

ವಿ. ಬಿ. ರಾವ್, ಬೆಂಗಳೂರು.

'ಕುಯ್ಯೊ ಮರ್ರ್ರೋ' ಎಂದು ಅರಚಿದ
ಹಾಲು ಹೋದರೆ ಮಾತ್ರವೇನೆಂದ.
ಅಡಿಗೆ ತಪ್ಪದಂತೆ ನಾ ಮಾಡಬಲ್ಲೆಂದು
ಒಲೆ ಹೊತ್ತಿಸಿದ ಅತಿ ಸುಲಭವೆಂದು

ಚಾಕಿಂದ ಕಾಯಿ ಪಲ್ಯ ಹೆಚ್ಚಲು
ಕೊಯ್ದುಕೊಂಡನಾತ ಕೈಯ ಕೂಡಲೇ
'ಅಯ್ಯೊ, ಅಪ್ಪಾ' ಎಂದು ಒದ್ದೆಬಟ್ಟೆ ಸುತ್ತಿ
ಕುಳಿತುಕೊಂಡ ನಾತ ಇನ್ನು ಬೇಸರವೆತ್ತಿ.

ಇಷ್ಟರಲ್ಲಿ ಎಸರು ಕುದಿಯುವುದು ಕೇಳಿಸಲು
ಎದ್ದ ಮಡಿಕಿಯಿಂದ ತಂದು ಅಕ್ಕಿ ಹಾಕಲು
ಸ್ವಲ್ಪ ಹೊತ್ತಿಗೆಲ್ಲಾ ಅನ್ನ ಬೇಯಿತು
'ಬುಡ ಬುಡಾ' 'ತಕತಕ' ಶಬ್ದ ಬಂದಿತು.

ಗಬಗಬನೆ ಎದ್ದ ಮಸಿ ಬಟ್ಟೆ ಮರೆತು
ಬರಿ ಕೈಯಲ್ಲೇ ಬಸಿಯಲು ಹೋದನಾತ.
ಕೈ ಸುಟ್ಟು ಅದು ಉರುಳಿಕೊಂಡಿತು
ಅನ್ನ ನೆಲದಮೇಲೆ ಚೆಲ್ಲಾಡಿತು.

ಇಷ್ಟರಲ್ಲಿ ಹೆಂಡತಿ ಬಂದು ನೋಡಿದಳು
ಗಂಡನೆಷ್ಟುಸೊಗುಸಾಗಿಅಡಿಗೆಮಾಡಿದನೆಂದು
'ಏನೂಂದ್ರೆ ಮನೆ ಕೆಲಸ ಸುಲಭವೇ' ಎಂದು
ಮಾತಾಡಲಿಲ್ಲ ಆತ ಮುಖವೆಲ್ಲಾ ಕುಂದಿರಲು.








ಒಂದು ಸಾರಿ ಬಂಗಾಳಾದೇಶದಲ್ಲಿ ಒಂದು ದೊಡ್ಡ ಉತ್ಸವ ನಡೆಯುತಿತ್ತು. ಆ ಉತ್ಸವದಲ್ಲಿ ಮಕ್ಕಳು ತಮಗಿಷ್ಟಬಂದ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಏಳು ವರ್ಷದ ಹುಡುಗನೊಬ್ಬನು ಶಿವನ ವಿಗ್ರಹವನ್ನು ಕೊಂಡುಕೊಂಡು ಅದನ್ನು ಬಹು ಜಾಗರೂಕತೆಯಿಂದ ತಲೆಯಮೇಲಿಟ್ಟುಕೊಂಡು ಮನೆಗೆ ಹಿಂತಿರುಗುತ್ತಿದ್ದನು. ದಾರಿಯಲ್ಲಿ ಒಂದು ಪ್ರಮಾದ ಸಂಭವಿಸಿತು. ರೋಡು ತಿರುವಿನಲ್ಲಿ ಒಂದು ಗಾಡಿ ವೇಗವಾಗಿ ಬರುತ್ತಿದೆ. ಆ ಗಾಡಿಯನ್ನು ನೋಡದೆ ಎದುರಾಗಿ ಒಬ್ಬ ಹುಡುಗ ವೇಗವಾಗಿ ಓಡುತ್ತಾ ಗಾಡಿ ಕೆಳಗೆ ಬಿದ್ದ. ಅವನಿಗೆ ಬಹಳ ಏಟುಗಳು ಬಿದ್ದು, ರಕ್ತದ ಕಾಲುವೆಯೇ ಹರಿಯಿತು. ಬೀದಿಯಲ್ಲಿ ಹೋಗುವ ಜನ ಇದನ್ನು ಕಂಡು 'ಅಯ್ಯೋ ಪಾಪ' ಎಂದು ಹೇಳಿ ಅವರವರ ಕೆಲಸಗಳಮೇಲೆ ಅವರು ಹೋಗುತ್ತಿದ್ದರೇ ಹೊರತು, ಆ ಹುಡುಗನನ್ನು ಮೇಲಕ್ಕೆ ಎಬ್ಬಿಸುವವರು ಒಬ್ಬರೂ ಇಲ್ಲವಾದರು. ಈಶ್ವರನ ವಿಗ್ರಹ ತೆಗೆದುಕೊಂಡು ಹೋಗುತ್ತಿದ್ದ ಬಾಲಕ ಈ ಪ್ರಮಾದವನ್ನು ಕಂಡಕೂಡಲೇ ವಿಗ್ರಹವನ್ನು ಒಂದೆಡೆ ಎಸೆದ. ಗಾಡಿಯ ಕೆಳಗೆ ಬಿದ್ದಿದ್ದ ಹುಡುಗನನ್ನು ಎಬ್ಬಿಸಿದ. ಅವನ ಮೈಮೇಲಿದ್ದ ರಕ್ತವನ್ನು ಒರೆಸಿ, ಅವನು ಚೇತರಿಸಿಕೊಂಡಮೇಲೆ ತನ್ನ ವಿಗ್ರಹವನ್ನು ತೆಗೆದುಕೊಂಡು ಮನೆಗೆ ಹೋಗೋಣವೆಂದು ಯೋಚಿಸಿದ. ಹೋಗಿ ನೋಡುತ್ತಾನೆ. ಆ ಈಶ್ವರನ ವಿಗ್ರಹ ಚೂರುಚೂರು ಆಗಿತ್ತು. ಅಲ್ಲಿ ಗುಂಪಿನಲ್ಲಿದ್ದ ಒಬ್ಬ ವೃದ್ಧ ಬ್ರಾಹ್ಮಣನು ಆಬಾಲಕನನ್ನು ಹತ್ತಿರ ಕರೆದು "ಅಪ್ಪಾ, ಮಗೂ, ಪಾಪ, ನಿನ್ನ ಬೊಂಬೆ ಒಡೆದು ಹೋಯಿತಲ್ಲಾ. ಮತ್ತೆ ದೇವರನ್ನು ಹೇಗೆ ಪೂಜಿಸುವೆ?" ಎಂದು ಕೇಳಿದ. ಅದಕ್ಕೆ ಆ ಬಾಲಕ "ಅಪಾಯಕರವಾದ ಸ್ಥಿತಿಯಲ್ಲಿದ್ದ ಸೋದರನಿಗೆ ಸಹಾಯ ಮಾಡಬಲ್ಲವನಾದೆ. ನನಗೆ ಅದೇ ಹಿರಿದು. ಮಾನವಸೇವೆಯೇ ಮಾಧವಸೇವೆ ಯಲ್ಲವೇ!" ಎಂದ. ಈ ವಾಕ್ಯ ಗಳನ್ನು ಕೇಳಿ ಎಲ್ಲರೂ ಆಶ್ಚರ್ಯ ಹೊಂದಿದರು. ಇವನು ಬಾಲಕನಲ್ಲ; ಮಹಾನುಭಾವನು ಎಂದರವರು. ಚಿಕ್ಕಂದಿನಲ್ಲೇ ಇಂಥಹ ಸದ್ಗುಣಗಳಿಂದ ಕೂಡಿದ ಆ ಏಳುವರ್ಷದ ಬಾಲಕ ಬೆಳೆದು ದೊಡ್ಡವನಾಗಿ, ಪ್ರಪಂಚವನ್ನೇ ನಡುಗಿಸಿದ. ಆತನೇ ಸ್ವಾಮಿ ವಿವೇಕಾನಂದ.



# ಮುಗ್ಧ ಹುಡುಗ

ರಂಗಣ್ಣ ಹತ್ತುವರ್ಷ ತುಂಬಿದ ಸಣ್ಣ ಹುಡುಗ. ಆದರೂ ಅವನದು ವಯಸ್ಸಿಗೆ ಮೀರಿದ ಆಲೋಚನೆ. ಪಾಪ, ತಂದೆಯನ್ನು ಚಿಕ್ಕಂದನಲ್ಲಿಯೇ ಕಳೆದುಕೊಂಡ. ತೀರಿ ಹೋದ ತಂದೆ, ಅವನಿಗೆ ಬಿಟ್ಟುಹೋದುದೆಲ್ಲಾ ಒಂದೇ ಒಂದು ಹಸು. ಅದನ್ನು ಕಂಡರೆ ರಂಗಣ್ಣನಿಗೆ ಅಮಿತಪ್ರೀತಿ. ಆ ಹಸುವಿನ ಹಾಲು ಮಾರಿಕೊಂಡು ಅವನೂ ಅವನ ತಾಯಿ ಹೊಟ್ಟೆ ಹೊರೆಯುತ್ತಿದ್ದರು.

ತನಗೆ ತಿಂಡಿಯಿಲ್ಲದಿದ್ದರೂ ಸಹಿಸುವನೇ ಹೊರತು ಹಸುವಿಗೆ ಸ್ವಲ್ಪ ಕಡಿಮೆಯಾದರೆ ರಂಗಣ್ಣ ಸಹಿಸುತ್ತಿರಲಿಲ್ಲ. ಕಾಲಸ್ಥಿತಿ ಬದಲಾಯಿಸಿತು. ಅವರ ಹೊಟ್ಟೆ ತುಂಬುವುದೇ ಕಷ್ಟವಾಯಿತು. ಇನ್ನು ಹಸುವನ್ನು ಹೇಗೆ ತಾನೇ ಪೋಷಿಸುವರು?

ಒಂದು ದಿನ ಸಾಯಂಕಾಲ ರಂಗಣ್ಣ ಹುಲ್ಲಿನ ಕಂತೆಯನ್ನು ಹೆಗಲಮೇಲೇರಿಕೊಂಡು ಬರುತ್ತಿದ್ದ. ಇಷ್ಟರಲ್ಲಿ ಯಾರೋ ಇಬ್ಬರು ಆ ದಾರಿಯಲ್ಲೇ ಒಂದು ಹಸುವನ್ನು ಎಳೆದುಕೊಂಡು ಹೋಗುತ್ತಿದ್ದರು. ನೋಡಿದರೆ ಅದು ನೆರೆ ಮನೆ ಸುಂದರಯ್ಯನವರ ಮನೆ ಹಸು. ರಂಗಣ್ಣನಿಗೆ ದುಃಖ ಉಮ್ಮಳಿಸಿ ಬಂತು. ಅವರು ಯಾರು, ಆ ಹಸುವನ್ನು ಹಾಗೆಲ್ಲಿಗೆ ಎಳೆದುಕೊಂಡು ಹೋಗುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳುವಸಲುವಾಗಿ ಅವರ ಹಿಂದೆಯೇ ಹೋದ.

ಅವರು ದನಗಳ ದೊಡ್ಡಿ ಸೇರಿ, ತಾವು ಎಳೆದುಕೊಂಡು ಬಂದ ಹಸುವನ್ನು ಒಳಗೆ ಕಟ್ಟಿ ಹಾಕಿದರು. ಮೇವು ತಂದು ಹಾಕಿ, ನೀರು ಸಹ ಕೊಟ್ಟರು.

ರಂಗಣ್ಣ ಅವರ ಹತ್ತಿರ ಹೋಗಿ "ಈ ಹಸು ಸುಂದರಯ್ಯನವರದಲ್ಲವೇ? ಇಲ್ಲೇಕೆ ಕಟ್ಟಿ ಹಾಕಿದಿರಿ?" ಎಂದು ಕೇಳಿದ.

ಊರಿನವರ ಹೊಲಗಳಲ್ಲಿ ಮೇಯುತ್ತಿದ್ದರೆ ಕಟ್ಟಿಹಾಕದೆ ಏನು ಮಾಡ್ತಾರೆ" ಎಂದರವರು.

"ಓ, ಹಾಗೋ." ಎಂದು ರಂಗಣ್ಣ ಮನೆಗೆ ಹೋದ.

ಅಂದಿನಿಂದ ಪ್ರತಿ ದಿನ ತನ್ನ ಹಸುವನ್ನು ಹೊಡೆದುಕೊಂಡು ದನಗಳ ದೊಡ್ಡಿ ಹತ್ತಿರ

ಡಿ. ಸಾವಿತ್ರಿ, ಧಾರವಾಡ.




ಮುಂಜಾನೆಯಿಂದ ಸಂಜೆಯವರೆವಿಗೂ ಅಲ್ಲೇ ಇದ್ದುಬಿಡುತ್ತಿದ್ದ. ಸುಂದರಯ್ಯನವರ ಹಸು ಇನ್ನೂ ದೊಡ್ಡಿಯಲ್ಲಿರುವುದೂ, ಅಲ್ಲಿರುವವರು ಅದಕ್ಕೆ ಮೇವೂ, ನೀರೂ ಕೊಡುತ್ತಿರುವುದನ್ನು ಕಂಡು ರಂಗಣ್ಣನಿಗೆ ಅನೇಕ ಆಲೋಚನೆಗಳುಂಟಾದವು.

ಒಂದು ದಿನ ಅವನು ಯಥಾಪ್ರಕಾರ ಹಸುವನ್ನು ಮೇಯಿಸಲು ತೆಗೆದುಕೊಂಡು ಹೋದ. ಒಂದು ಮರದಡಿ ತಾನು ಕುಳಿತು, ಹಸುವನ್ನು ಮೇಯಲು ಬಿಟ್ಟ.

ರಂಗಣ್ಣನಿಗೆ ಹಾಗೇ ನಿದ್ದೆ ಬಂದುಬಿಟ್ಟಿತು. ಎಚ್ಚರವಾಗಿ ನೋಡಿದರೆ ಹಸು ಕಾಣಿಸಲಿಲ್ಲ. ಒಂದೇ ಓಟಕಿತ್ತ ದನಗಳದೊಡ್ಡಿಯಹತ್ತಿರಕ್ಕೆ. ಸುಂದರಯ್ಯನವರ ಹಸುವಿನ ಪಕ್ಕದಲ್ಲೇ ತಮ್ಮ ಹಸುವನೂ ಕಟ್ಟಿದ್ದಾರೆ.

ಇದನ್ನು ಕಂಡಕೂಡಲೇ ರಂಗಣ್ಣನಿಗೆ ಮೊದಲು ದುಃಖವಾಯಿತು. ಆದರೆ ಕೂಡಲೇ ಅವನಿಗೊಂದು ಯೋಚನೆ ಬಂತು. ಅನಿರೀಕ್ಷಿತವಾಗಿ ಹಸುವನ್ನು ದನಗಳ ದೊಡ್ಡಿಯಲ್ಲಿ ಕಟ್ಟಿಹಾಕಿದ್ದಾರೆ. ಇದೊಂದು ರೀತಿ ಒಳ್ಳೆಯದೇ ಆಯಿತು. ಅದರ ಪೋಷಣೆಯನ್ನು ಕುರಿತು ಚಿಂತೆ ಪಡಬೇಕಾಗಿಲ್ಲ. ಅದೇ ನನಗೆ ಸಂತೋಷ' ಎಂದುಕೊಂಡ.

ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಮನೆ ಸೇರಿದ. "ಹಸು ಎಲ್ಲೋ?" ಎಂದು ಕೇಳಿದಳು ತಾಯಿ.

" ಒಂದುಕಡೆ ಇದೆ. ಸುಖವಾಗಿದೆ. ಅದರ ಪೋಷಣೆ ಕುರಿತು ನಾವೇನು ಚಿಂತಿಸಬೇಕಾಗಿಲ್ಲ. ನಮ್ಮ ಸಂಗತಿ ನಾವು ನೋಡಿಕೊಂಡರೆ ಆಯಿತು " ಎಂದ ರಂಗಣ್ಣ.

"ಅದೇನೋ ಅದು ಹಾಗೆ ಹೇಳುವೆ? ನಮ್ಮ ಹಸುವನ್ನು ಮತ್ತೆ ಯಾರು ಪೋಷಿಸುತ್ತಾರೆ? ಏಕೆ ಪೋಷಿಸುತ್ತಾರೆ. ಯಾರೋ ತೆಗೆದುಕೊಂಡು ಹೋಗಿ ನಮ್ಮ ಹಸುವನ್ನು ಪೋಷಿಸಿದರೆ ನಮಗೆ ಬಂದ ಲಾಭವಾದರೂ ಏನು? ಯಾರಾದರೂ ತೆಗೆದುಕೊಂಡು ಹೋಗಿ ಮೇಯಿಸಿದರೆ ಅವರೇ ಅದರ ಹಾಲು ಕರೆದುಕೊಳ್ಳುತ್ತಾರಷ್ಟೆ, ನಮ್ಮ ಗತಿ ಏನಾಗಬೇಕು?" ಎಂದಳು ತಾಯಿ.

ಅಂದೇ ರಂಗಣ್ಣ ದನಗಳ ದೊಡ್ಡಿ ಹತ್ತಿರಕ್ಕೆ ಹೋಗಿ ಅಲ್ಲಿದ್ದ ಕಾವಲುಗಾರರೊಂದಿಗೆ "ನಾನೂ ಸಹ ನಿಮ್ಮೊಂದಿಗೆ ದನಗಳ ಕಾವಲು ಕಾಯುತ್ತಿರಲೇ?" ಎಂದು ಕೇಳಿದ.

ಅದಕ್ಕೆ ಅವರು ‘ ನಮ್ಮದೇನಿದೆ? ಪಟೇಲರನ್ನು ಕೇಳು ” ಎಂದರು. ತಕ್ಷಣ ರಂಗಣ್ಣ ಪಟೇಲರ ಹತ್ತಿರ ಹೋಗಿ ಬೇಡಿಕೊಂಡ.

“ ಎಲೋ, ಹೈದಾ, ಅದು ತುಂಬಾ ಕಷ್ಟಕರವಾದ ಕೆಲಸ. ನೀನು ನೋಡಿದರೆ ಚೋಟುದ್ದಾ ಹುಡುಗ. ನಿನ್ನ ವಿಷಯ ಕುರಿತು ಸರಕಾರಕ್ಕೆ ಬರೆಯಬೇಕು. ಸಂಬಳ ಸಾರಿಗೆ ಕೊಡುವುದು ಅವರೇ ಅಲ್ಲವೇ?” ಎಂದ ಪಟೇಲ.

“ ಸ್ವಾಮಿ, ನನಗೆ ಸಂಬಳ ಬೇಡ. ಬಿಟ್ಟೀ ಚಾಕರಿ ಮಾಡ್ತೇನೆ.” ಎಂದ ರಂಗಣ್ಣ ಉತ್ಸಾಹದಿಂದ. ಪಟೇಲ ಅದಕ್ಕೆ ಒಪ್ಪಿಕೊಂಡ.

* * *

ಮೂರನೇಯ ದಿನ ರಂಗಣ್ಣ ತಂಗಳುಂಡು ದನಗಳ ದೊಡ್ಡಿಗೆ ಬಂದ. ಮತ್ತೆ ಸ್ವಲ್ಪ ಸಮಯಕ್ಕೆಲ್ಲಾ ರಂಗಣ್ಣನ ತಾಯಿ ಲಬೋ ಲಬೋ ಎಂದು ಗೋಳಾಡುತ್ತಾ ಅಲ್ಲಿಗೆ ಬಂದಳು. ಆಕೆಯ ಸಂಗಡ ಪಟೇಲನೂ ಬಂದ.

ರಂಗಣ್ಣನನ್ನು ಕಂಡಕೂಡಲೇ ಪಟೇಲ ಎಂತಹ ಮೋಸ ಮಾಡಿದೆಯೋ ನೀನು? ಹಸುವನ್ನು ಕಂಡವರ ಹೊಲಗಳಲ್ಲಿ ಬಿಟ್ಟು, ಏನೂ ಅರಿಯದವನಂತೆ ನಟಿಸಿದ್ದೇ ಅಲ್ಲದೆ, ನನಗೆ ಟೋಪಿ ಹಾಕಿ ದೊಡ್ಡಿ ಕಾವಲಿಗೆ ನೌಕರನಾಗಿ ಬೇರೆ ಸೇರಿದೆಯಾ?” ಎಂದು ಕೆಂಡಕಾರಿದ.



ರಂಗಣ್ಣನ ತಾಯಿ ಪಟೇಲರ ಕಾಲಿಗೆ ಬಿದ್ದು ಕ್ಷಮಿಸಿ, ಸ್ವಾಮಿ’’ ಎಂದು ಪ್ರಾರ್ಥಿಸಿದಳು.

“ ಸರಿ, ದುಡ್ಡು ಕೊಟ್ಟು ಹಸುವನ್ನು ಬಿಡಿಸಿಕೊಂಡು ಹೋಗಿ ” ಎಂದ ಪಟೇಲ.

“ ಸ್ವಾಮಿ, ಮರುಕ ತೋರಿಸಿ. ಕೈಯಲ್ಲಿ ಒಂದು ಕವಡೆಯಾದರೂ ಇಲ್ಲ ” ಎಂದಳು ಮುದುಕಿ.

ಇಷ್ಟರಲ್ಲಿ ರಂಗಣ್ಣ ಮುಂದೆ ಬಂದು “ ಸ್ವಾಮಿ ಹಣ ಮಾತ್ರ ಕೇಳಬೇಡಿ. ನಿಮ್ಮಿಷ್ಟ ಬಂದ ಶಿಕ್ಷೆ ಕೊಡಿ ” ಅಂದ.

“ ಸರಿ, ಇವನಿಗೆ ಆರು ಏಟು ಕೊಡಿ” ಎಂದ ಪಟೇಲ.

ರಂಗಣ್ಣ ಕೈ ಚಾಚಿದ. ಕಾವಲುಗಾರ ನಾಲ್ಕು ಏಟು ಹೊಡೆದ. ರಂಗಣ್ಣ ತಡೆದು

ಕೊಂಡ. ಐದನೇ ಏಟು ಬಿದ್ದಕೂಡಲೇ ಸ್ಮೃತಿ ತಪ್ಪಿ ಬಿದ್ದುಬಿಟ್ಟ. ತುಸಹೊತ್ತಿಗೆ ಅವನಿಗೆ ಪ್ರಜ್ಞೆ ಬಂತು. ಆರನೇ ಏಟಿಗೆ ಮತ್ತೆ ಕೈಚಾಚಿದ ರಂಗಣ್ಣ. ಪಟೇಲನ ಹೃದಯ ಕರಗಿತು. "ನಿಲ್ಲಿಸಿ" ಎಂದ. ರಂಗಣ್ಣನನ್ನು ತನ್ನ ಮನೆಗೆ ಕರೆದುಕೊಂಡು ಹೋದ.

ಅವನು ಸ್ವಲ್ಪ ಸುಧಾರಿಸಿಕೊಂಡ ತರುವಾಯ ಪಟೇಲ "ಹೈದಾ, ಹೀಗೆ ಮೋಸ ಮಾಡುವುದು ತಪ್ಪಲ್ಲವೇ?" ಎಂದು ಕೇಳಿದ.

ಅದಕ್ಕೆ ರಂಗಣ್ಣ "ಸ್ವಾಮಿ, ದನಗಳ ದೊಡ್ಡಿಯೆಂದರೆ ನನಗೇನೋ ತಿಳಿಯದು. ನಾನು ಬೇಕೆಂದು ನನ್ನ ಹಸುವನ್ನು ಪರರ ಹೊಲಗಳಲ್ಲಿ ಮೇಯಲು ಬಿಡಲಿಲ್ಲ. ದುರದೃಷ್ಟವಶಾತ್ ಅದು ಸಿಕ್ಕಿಕೊಂಡಿತು. ಅದಕ್ಕೆ ನಾನು ದುಃಖಪಟ್ಟೆ ಆದರೆ ಆಲೋಚಿಸಿ ನೋಡಲು, ಅದಕ್ಕೆ ಅಲ್ಲಿ ಚೆನ್ನಾಗಿ ಪೋಷಣೆ ನಡೆಯುತ್ತಿರುವುದು, ನಮಗೆ ತಿಂಡಿಕೊರತೆಯಾದರೂ ಆಗಲಿ, ಅದಾದರೂ ಅಲ್ಲಿ ಹಾಯಾಗಿ ಜೀವಿಸಿಕೊಂಡಿರುವುದು ಎಂದು ತೃಪ್ತಿ ಉಂಟಾಯಿತು. ಅದನ್ನು ಬಿಟ್ಟು ನಾನೊಂದು ಕ್ಷಣವಾದರೂ ಇರಲಾರೆ. ಅದರಿಂದಲೇ ನಾನು ಸಂಬಳವಿಲ್ಲದೆ ನೌಕರಿಗೆ ಸೇರಿದೆ. ಈಗ ನೀವು ಹಸುವನ್ನು ಅಟ್ಟಿಕೊಂಡು ಹೋಗಿ ಎಂದು ಹೇಳುತ್ತಿರುವಿರಿ. ನಮ್ಮ ಹೊಟ್ಟೆ ತುಂಬುವುದೇ ಕಷ್ಟವಾಗಿರುವಾಗ ಅದನ್ನೇನು ಸಾಕೇವು?" ಎಂದ.

ಪಟೇಲ ರಂಗಣ್ಣನ ಹೆಗಲಮೇಲೆ ಕೈಹಾಕಿ "ಎಂತಹ ಅನಾಯಕನೋ ನೀನು ರಂಗಣ್ಣ. ಊರಿನವರ ಹಸುಗಳನ್ನು ನಾವು ಉಚಿತವಾಗಿ ಸಾಕುವೆವೆಂದು ಬಾವಿಸಿದೆಯಾ? ಹೋಗಲಿ ಬಿಡು, ಇಂದಿನಿಂದ ನೀವು ನಮ್ಮ ಮನೆಯಲ್ಲೇ ಇದ್ದುಬಿಡಿ. ನಿಮ್ಮ ಹಸು ಸಹ ನಮ್ಮ ಹಸುಗಳೊಂದಿಗೆ ಇರಲಿ. ಅವುಗಳನ್ನೆಲ್ಲಾ ನೀನೇ ಕಾಯುತ್ತಿರು" ಎಂದ.

ಅಂದಿನಿಂದ ರಂಗಣ್ಣ ತುಂಬಾ ವಿಶ್ವಾಸದಿಂದ ಕೆಲಸ ಮಾಡಿಕೊಂಡು ಹೋಗುತ್ತಿದ್ದ. ಅವನೂ ಅವನ ತಾಯಿ ಮತ್ತು ಅವರ ಹಸು ಕ್ಷೇಮವಾಗಿದ್ದಾರೆ.






## 13

[ ಅವಳಿ ಸೋದರರೂ ರಾಜಕುಮಾರಿಯರೂ ಯುಕ್ತಿಯಿಂದ ರಾಕ್ಷಸನ ತಮ್ಮನನ್ನು ಕೊಂದು ಹಾಕುವುದೂ, ಅವನಿಗೆ ಸಿಕ್ಕಿ ಬೀಳದೆ ಕೋತಿಯು ರೂಪವಾಗಿ ಬದಲಾಯಿಸುವುದೂ, ಅನಿರೀಕ್ಷಿತವಾಗಿ ಗಡ್ಡದವನನ್ನು ತಮ್ಮ ಸೇವಕನನ್ನಾಗಿ ಮಾಡಿಕೊಳ್ಳುವುದೂ, ಕೊನೆಗೆ ರಾಕ್ಷಸನನ್ನು ಕೊಲ್ಲಲು ಹೋದ ಉದಯನನು ಬಾವಿಯಲ್ಲಿ ಬಿದ್ದುದೂ, ಹಿಂದಿನ ತಿಂಗಳು ಓದಿದಿರಿ. ತರುವಾಯ....]

ಬಾವಿಯಲ್ಲಿ ಬಿದ್ದ ಉದಯನನು ಗಡ್ಡದವನ ರೂಪದಲ್ಲಿ ಹಾಗೇ ಒಂದು ವಾರ ಇದ್ದುಬಿಟ್ಟ. ಹೊರಗೆ ಬರುವ ಮಾರ್ಗ ಕಾಣಿಸಲಿಲ್ಲ. ಹಾಗೇನೆ ಭಸ್ಮದಿಂದ ಅದೃಶ್ಯ ಮಾಡಲ್ಪಟ್ಟ ಸಂಧ್ಯಾ ನಿಶೀಥರು ಗಡ್ಡದವನೊಂದಿಗೆ ಅದೇ ರೀತಿ ಅದೃಶ್ಯ ರೂಪದಲ್ಲೇ ಇರಬೇಕಾಗಿ ಬಂತು. ಏಕೆಂದರೆ ಅವರಿಗೆ ಮತ್ತೆ ಮಾಮೂಲು ಸ್ವರೂಪ ತರಿಸಿ ಕೊಡಬಲ್ಲ ಭಸ್ಮ ಉದಯನನ ಹತ್ತಿರವೇ ಉಳಿದು ಬಿಟ್ಟಿತ್ತಲ್ಲವೇ?

ಇವರ ಸ್ಥಿತಿ ಈ ರೀತಿ ಇರುವಲ್ಲಿ ರಾಜಕುಮಾರಿಯರು ಆ ಒಂದು ವಾರ ಸುಮ್ಮನಿರಲಿಲ್ಲ. ಕ್ಷಣಕಾಲವಾದರೂ ಬಿಡದಂತೆ ಕಾಣುತ್ತಿದ್ದ ಅವಳಿ ಸಹೋದರರು ಇದ್ದಕ್ಕಿದ್ದಂತೆಯೇ ಏಳು ದಿವಸಗಳಾದರೂ ಕಾಣದಿರಲು, ಅವರು ಮತ್ತೆ ಯಾವುದೋ ಆಪತ್ತಿನಲ್ಲಿ ಸಿಲುಕಿಕೊಂಡಿರುವರೆಂದು ಊಹಿಸಿದರು. ಸುತ್ತಮುತ್ತಲೆಲ್ಲಾ ಹುಡಿಕಿ ನೋಡಿದರು. ಹೀಗೇ ಹುಡುಕಾಡುತ್ತಾ ಹುಡುಕಾಡುತ್ತಾ ಅವರು ಉದಯನನು ಬಿದ್ದಿದ್ದ ಪಾಳು ಬಾವಿಯ ಹತ್ತಿರ ಬಂದರು. ಆದರೆ ಗಡ್ಡದವನ ಆಕಾರದಲ್ಲಿದ್ದನಾದುದರಿಂದ ಆ ಗಿಡ್ಡ ಮನುಷ್ಯ ಅವರ ದೃಷ್ಟಿಗೆ ಬೀಳಲಿಲ್ಲ. ರಾಜಕುಮಾರಿಯರು ಬಾವಿಯ ಹತ್ತಿರ ಬಂದ ಸಪ್ಪಳ ಕೇಳಿ,




ಉದಯನನು ಒಂದು ಸಾರಿ ಕೂಗಿದ. ಆದರೆ ಆಕಾರಕ್ಕೆ ತಕ್ಕಂತೆ ಆತನ ಗಂಟಲು ಸಹ ತೀರಾ ಸಣ್ಣಗಾದುದರಿಂದ ಆ ಕರೆ ರಾಜಕುಮಾರಿಯರಿಗೆ ಕೇಳಿಸಲಿಲ್ಲ.

ತಾನು ಅರಿಚಿದರೂ ರಾಜಕುಮಾರಿಯರಿಗೆ ತನ್ನ ಪರಿಸ್ಥಿತಿ ತಿಳಿಯದಾಗಲು, ಉದಯನನು ತುಂಬಾ ನಿರಾಶೆಗೊಂಡ. ಆದರೆ ಒಂದು ಕ್ಷಣದಲ್ಲಿ ಉದಯನನಿಗೆ ಒಂದು ವಿಷಯ ಜ್ಞಾಪಕಕ್ಕೆ ಬಂತು.

ರಾಕ್ಷಸನು ತನ್ನನ್ನು ಬಾವಿಯಲ್ಲಿ ತಳ್ಳಿದಾಗ ದಡದಲ್ಲಿ ಬಿದ್ದಿದ್ದ ಉದಯನನ ಕಠಾರಿಯನ್ನೂ ಸಹ ಬಾವಿಯಲ್ಲಿ ಎಸೆದು ಹೊರಟು ಹೋದ. ಈಗ ಉದಯನನು ಆ ಕಠಾರಿಯನ್ನು ಬಾವಿಯಿಂದ ಹೊರಕ್ಕೆ ಎಸೆದ. ಅದು ಹಠಾತ್ತನೆ ಬಂದು ಬಾವಿಯ ಹೊರಗೆ ನೆಲದ ಮೇಲೆ ಬಿತ್ತು. ಈ ಕಠಾರಿಯನ್ನು ಕಂಡಾದರೂ ರಾಜಕುಮಾರಿಯರು ತಾನು ಬಾವಿಯಲ್ಲಿರುವ ವಿಷಯ ತಿಳಿದುಕೊಳ್ಳುವರೆಂದು ಉದಯನನ ನಿರೀಕ್ಷೆ. ಆದರೆ ಆತನು ನೆನೆಸಿದಂತೆ ಅವರು ಕಠಾರಿಯನ್ನು ನೋಡಲೇ ಇಲ್ಲ.

ಮತ್ತೊಂದು ವಾರ ಕಳೆದ ತರುವಾಯ ರಾಜಕುಮಾರಿಯರು ಮತ್ತೆ ಆ ಬಾವಿಯ ಹತ್ತಿರಕ್ಕೆ ಬಂದರು. ಬಾವಿಯ ಕಟ್ಟೆಯ ಹತ್ತಿರ ಬಿದ್ದಿದ್ದ ಕಠಾರಿಯನ್ನು ನೋಡಿ ಅವರು ಅಚ್ಚರಿಪಟ್ಟರು. 'ಇದೇನಿದು. ಹಿಂದಿನ ಸಾರಿ ನಾವು ಇಲ್ಲಿಗೆ ಬಂದಾಗ ಕಾಣಿಸದ ಕಠಾರಿ ಈಗೆಲ್ಲಿಂದ ಬಂತು? ಒಂದು ಪಕ್ಷ ರಾಕ್ಷಸನು ಉದಯನನನ್ನು ಕೊಂದು ಈ ಬಾವಿಯಲ್ಲಿ ಹಾಕಿರಲಾರನಷ್ಟೇ!' ಎಂದುಕೊಂಡು ಅವರು ಬಾವಿಯಲ್ಲಿ ಇಣಿಕಿ ನೋಡಿದರು.

ಅದೇನು ವಿಚಿತ್ರವೋ ಬಾವಿಯ ಅರ್ಧದಷ್ಟು ಪರಿಪರಿ ಹಣ್ಣುಹಂಪಲುಗಳಿಂದ ತುಂಬಿತ್ತು. ಅವುಗಳ ಮೇಲೆ ಗಡ್ಡದವನ ವೇಷದಲ್ಲಿ ಉದಯನನು ನಿಂತಿದ್ದಾನೆ. ಆತನ ಕೈಯಲ್ಲಿ ಮಾಯಾ ತುವಾಲಿದೆ. ಆ ತುವಾಲಿನಿಂದ ಹಣ್ಣುಗಳು ರಾಶಿರಾಶಿಯಾಗಿ ಬರುತ್ತಲೇ ಇದೆ. ಹಣ್ಣುಗಳಿಂದ ಬಾವಿ ತುಂಬಿಹೋಯಿತು.

ಆಶ್ಚರ್ಯದಿಂದ ರಾಜಕುಮಾರಿಯರು ಹಾಗೇ ನೋಡುತ್ತಾ ನಿಂತುಬಿಟ್ಟರು. ತುಸ ಹೊತ್ತಿಗೆಲ್ಲಾ ಬಾವಿಯ ಅಂಚಿನವರೆ

ಏಗೂ ಹಣ್ಣುಗಳು ಬಂದು ಬಾವಿ ತುಂಬಿ ಹೋಯಿತು. ಆ ಹಣ್ಣುಗಳ ಮೇಲು ಭಾಗ ದಲ್ಲಿ ನಿಂತಿದ್ದ ಉದಯನನನ್ನು ರಾಜಕುಮಾರಿ ಯರು ಕೈ ಹಿಡಿದು ಹೊರಕ್ಕೆಳೆದರು.

ತರುವಾಯ ತಾನು ರಾಕ್ಷಸನ ತಲೆ ತುಂಡರಿಸಿದುದೂ, ಅವನು ತನ್ನನ್ನು ಬಾವಿ ಯಲ್ಲಿ ಎಸೆದದ್ದೂ, ಆತರುವಾಯ ತಾನು ಮಾಡಿದ ಉಪಾಯಗಳನ್ನು ವಿವರವಾಗಿ ರಾಜ ಕುಮಾರಿಯರಿಗೆ ಹೇಳಿದ ಉದಯನ. ಅದೆಲ್ಲ ವನ್ನೂ ಅವರು ಕೇಳಿ "ಏನಾದರೇನು, ನಿಮ್ಮನ್ನು ಕಾಪಾಡಿದ್ದು ಈ ಮಾಯಾ ತುವಾಲು. ಅದರ ಮೂಲಕ ಹೊರಬೀಳುವ ಉಪಾಯ ನಿಮ್ಮ ಮನಸ್ಸಿಗೆ ಹೊಳೆದಿದ್ದು ಸಂತೋಷಕರವಾದ ವಿಷಯವೇ ಸರಿ" ಎಂದರು.

ಕೂಡಲೇ ಅವರು ಗಡ್ಡದವನೂ, ಸಂಧ್ಯಾ ನಿಶೀಥರು ಅದೃಶ್ಯ ರೂಪದಲ್ಲಿದ್ದ ಜಾಗವನ್ನು ಸೇರಿಕೊಂಡರು. ಉದಯನನು ತನ್ನ ಹತ್ತಿರ ವಿದ್ದ ಭಸ್ಮವನ್ನು ಎರಚಲು ಅವರು ಮೂವರೂ ಮತ್ತೆ ಮಾಮೂಲು ಸ್ವರೂಪ ಪಡೆದರು.

ನಡೆದ ವಿಷಯ ಕೇಳಿ ತಿಳಿದುಕೊಂಡ ಕೂಡಲೇ ಗಡ್ಡದವನು "ಹಾಗಾದರೆ ನನ್ನನ್ನು ಬಾವಿಯಲ್ಲಿ ಎಸೆದೆ ಅಂತ ತಿಳಿದುಕೊಂ ಡಿದ್ದಾನೆ ಆ ರಾಕ್ಷಸ. ಇದೂ ಒಂದು ಒಳ್ಳೆ ಯದೇ ಆಯಿತು. ಇನ್ನು ಮುಂದಿನ ವಿಷಯ ಆಲೋಚಿಸುವ" ಎಂದ.

ಅದಕ್ಕೆ ಉದಯನನು "ಹೌದು. ಈ ಸಾರಿ




ಅವನು ಬಂದಾಗ ನನಗೋಸ್ಕರ ಬಾವಿಯಲ್ಲಿ ಇಣಕಿ ನೋಡುವನಲ್ಲವೆ? ನಾನಲ್ಲಿಲ್ಲದೆ ಹಣ್ಣುಗಳಿಂದ ತುಂಬಿರುವ ಬಾವಿ ಕಂಡು ಅವನು ಅನುಮಾನ ಪಡುವುದಿಲ್ಲವೆ?" ಎಂದ.

"ಅವನು ಬರುವ ಸಮಯಕ್ಕೆ ಬಾವಿಯಿದ್ದ ರಷ್ಟೇ?" ಎಂದ ಗಡ್ಡದವ.

ಕೂಡಲೇ ಅವರು ಬಾವಿಯ ಹತ್ತಿರ ಹೋಗಿ ಭಸ್ಮವನ್ನು ಎರಚಲು ಆ ಬಾವಿ ಮಾಯವಾಯಿತು. ಅದರ ಸ್ಥಳದಲ್ಲಿ ಮೈದಾನ ಕಾಣಿಸಿತು.

ಆಗ ಉದಯನನು ಗಡ್ಡದವನೊಂದಿಗೆ "ಸರಿ, ನೀನೀಗ ಮಾಡಬೇಕಾದ ಕೆಲಸ ಒಂದಿದೆ. ನಾವು ರಾಜಕುಮಾರಿಯರನ್ನು ಹುಡುಕಲು ಹೊರಟು ಈಗಾಗಲೇ ಏಳು ವರ್ಷಗಳಾದವು. ಅಲ್ಲಿ ರಾಜ ಮತ್ತು ರಾಣಿ



ನಾವು ಏನಾದೆವೋ ಎಂದು ಕಳವಳಗೊಂಡಿರಬಹುದು. ಆದ್ದರಿಂದ ನೀನು ಈ ಕ್ಷಣವೇ ಶ್ರಾವಸ್ತಿ ನಗರಕ್ಕೆ ಹೊರಟು, ರಾಜಕುಮಾರಿಯರೂ, ನಾವೂ ಸುರಕ್ಷಿತವಾಗಿರುವೆವೆಂದೂ, ಶೀಘ್ರದಲ್ಲೇ ಮನೆಗೆ ಬಂದು ಸೇರುವೆವೆಂದೂ ಹೇಳಬೇಕು" ಎಂದ.

ಗಡ್ಡದವನು 'ಸರಿ' ಎಂದು ಆ ಕ್ಷಣವೇ ಶ್ರಾವಸ್ತಿನಗರಕ್ಕೆ ಪ್ರಯಾಣ ಬೆಳೆಸಿದ. ಹೋಗುವಾಗ ಉದಯನ ತಾನು ಮೊಟ್ಟಮೊದಲು ಮಾಯಾ ಭವನವನ್ನು ಪ್ರವೇಶಿಸುವ ಮುನ್ನ ಕಂದಕದಲ್ಲಿ ಬಿದ್ದುಹೋದುದೂ, ತನ್ನ ಅಶ್ವವನ್ನು ಆ ಕಂದಕದಲ್ಲೇ ಇರಿಸಿ, ತಾನು ಮಾತ್ರ ಯಾವರೀತಿ ಹೊರಗೆ ಬಂದುದೂ ಎಲ್ಲಾ ವಿಷಯ ಹೇಳುತ್ತಾ "ಕಾಲುನಡಿಗೆಯಿಂದ ಹೊರಟರೆ ನೀನು ಶ್ರಾವಸ್ತಿ ನಗರವನ್ನು ಸೇರುವುದಾದರೂ ಎಂದಿಗೆ? ಕುದುರೆಮೇಲೆ ಹೋಗಿ ಬಾ. ಮೊದಲು ಅವರು ನಿನ್ನನ್ನು ನಂಬದೇ ಹೋಗಬಹುದು. ಆದರೆ ಕುದುರೆಯ ಗುರುತು ಹಿಡಿದ ತರುವಾಯ ನಂಬಿಯೇ ತೀರುವರು" ಎಂದ.

ಉದಯನನ ಬಿಳಿ ಕುದುರೆಯಮೇಲೇರಿ ಗಡ್ಡದವನು ಪ್ರಯಾಣ ಬೆಳೆಸಿದ.

ಹಾಗೇ ಹೋಗುತ್ತಿರುವಲ್ಲಿ ಒಂದು ಮೈದಾನದಲ್ಲಿ ದಾನಶೀಲ ಮಹಾರಾಜನ ಭಟರು, ಸಂಧ್ಯಾ ನಿಶೀಥರ ಅಶ್ವಗಳಮೇಲೇರಿ ಬರುತ್ತಾ ಗಡ್ಡದವನನ್ನು ಎದುರುಗೊಂಡರು. ತಮ್ಮ ಅರಸನ ಶ್ವೇತ ಅಶ್ವವನ್ನು ಕಂಡ ಕೂಡಲೇ ಅವರು ಗುರುತು ಹಚ್ಚಿ, ಅದರ ಮೇಲೆ ಯಾರೋ ಹೊಸಬನಿರುವುದನ್ನು ಕಂಡು, ಅವನನ್ನು ಅಟಕಾಯಿಸಿದರು.

"ಯಾರಾಯ್ಯಾ, ನೀನು? ಈ ಕುದುರೆ ನಿನಗೆಲ್ಲಿಂದ ಬಂತು. ಹೀಗೆ ಎತ್ತಕಡೆ ಹೋಗುತ್ತಿರುವೆ? ನಿನ್ನ ವಿಷಯವೆಲ್ಲಾ ಹೇಳು" ಎಂದರು.

ಅದಕ್ಕೆ ಗಡ್ಡದವನು "ನಾನು ದಾನಶೀಲ ಮಹಾರಾಜರಿಗೆ ಒಂದು ಶುಭವಾರ್ತೆ ತಲುಪಿಸಲು ಹೋಗುತ್ತಿದ್ದೇನೆ. ಅಂದಹಾಗೆ, ನೀವು ಈಗ ಹತ್ತಿಬಂದಿರುವ ಕುದುರೆಗಳನ್ನು ನಾನು ಹಿಂದೆ ಎಲ್ಲೋ ನೋಡಿದಂತಿದೆಯಲ್ಲಾ? ನೀವು ಮಹಾರಾಜನ ಸೇವಕರೇನು?" ಎಂದು ಕೇಳಿದ.

"ಹೌದು. ನೀನು ತಂದಿರುವ ಶುಭಸಮಾ

ಚಾರವೇನೋ ಮೊದಲು ಹೇಳು" ಎಂದು ಕಾತುರದಿಂದ ಕೇಳಿದರು ರಾಜ ಭಟರು.

"ರಾಜಕುಮಾರಿಯರೂ, ಅವರನ್ನು ಹುಡುಕಲು ಹೋದ ಹುಡುಗರೂ ಸುರಕ್ಷಿತವಾಗಿರುವರು. ಈ ವಿಷಯ ಹೇಳಬೇಕು" ಎಂದ ಗಡ್ಡದವ.

"ಹಾಗೋ, ನಾವೂ ನಿನ್ನೊಂದಿಗೆ ಬರುತ್ತೇವೆ" ಎಂದರು ಭಟರು, ಸಂತೋಷದಿಂದ.

"ಹಾಗಲ್ಲ, ಒಂದು ಕೆಲಸ ಮಾಡೋಣ. ಈಗ ನಾವು ಮೂವರೂ ಕಲೆತು ರಾಜಕುಮಾರಿಯರಿರುವಲ್ಲಿಗೆ ಹೋಗೋಣ. ನೀವಿಬ್ಬರೂ ಅಲ್ಲಿಯೇ ಉಳಿದು ಅವರನ್ನು ಕಾಪಾಡುತ್ತಿರಿ. ನಾನು ಮತ್ತೆ ಹೋಗಿ ರಾಜನಿಗೆ ಸುದ್ಧಿ ಮುಟ್ಟಿಸುವೆನು" ಎಂದ ಗಡ್ಡದವ.

ಸರಿ ಅಂತ ಅವರು ಮೂವರೂ ಅವಳಿ ಸಹೋದರರಿರುವ ಜಾಗ ಸೇರಿದರು. ಭಟರನ್ನು ಅಲ್ಲಿಯೇ ಬಿಟ್ಟು, ಗಡ್ಡದವನು ಶ್ರಾವಸ್ತಿ ನಗರದಭಿಮುಖವಾಗಿ ಹೊರಟ.

ಸ್ವಲ್ಪ ದೂರ ಹೋದಕೂಡಲೇ ಸುಂಟರುಗಾಳಿ ಪ್ರಾರಂಭವಾಯಿತು. ರಾಕ್ಷಸನ ಬರುವಿಕೆಗೆ ಸೂಚನೆಯೆಂದು ಗ್ರಹಿಸಿ ಗಡ್ಡದವನು ಕುದುರೆಯನ್ನು ಶರವೇಗದಿಂದ ಓಡಿಸಿದ. ಆದರೂ ರಾಕ್ಷಸನು ರಿವ್ವನೆ ಬಂದು ಕುದುರೆಯಮೇಲೆ ಹೋಗುತ್ತಿದ್ದ ಗಡ್ಡದವನನ್ನು ಆಕಾಶ ಮಾರ್ಗದಲ್ಲೇ ಎತ್ತಿಕೊಂಡು ಹೋದ.





ಸವಾರನಿಲ್ಲದ ಕುದುರೆ ಹೋಗಿಹೋಗಿ ಒಂದು ವಾರಕ್ಕೆ ಶ್ರಾವಸ್ತಿನಗರವನ್ನು ಸೇರಿ ರಾಜನ ಅರಮನೆಯನ್ನು ಸೇರಿಕೊಂಡಿತು. ರಾಜನು ಅದನ್ನು ನೋಡಿದಕೂಡಲೇ ಓಡೋಡಿ ಬಂದು ಅದನ್ನು ಒಳಗೆ ಕರೆದುಕೊಂಡು ಹೋಗಲು ಯತ್ನಿಸಿದ. ಆದರದು ರಾಜನೊಂದಿಗೆ ಒಳಗೆ ಹೋಗಲು ಇಷ್ಟಪಡದೆ, ಚಂಡಿಹಿಡಿದು ಬಂದ ದಾರಿಯಲ್ಲೇ ಹೋಗಲು ಹವಣಿಸಿತು.

ಸೇವಕರೆಲ್ಲರೂ ಗುಂಪುಗೂಡಿದರು. ಆಗ ರಾಜನು "ಉದಯನನು ಏನಾದನೋ? ಈ ಕುದುರೆ ಮಾತ್ರ ಇಲ್ಲಿಗೆ ಹೇಗೆ ಬಂದಿತೋ, ಏನೂ ತೋರುತ್ತಿಲ್ಲ. ಇದರ ಚೇಷ್ಟೆಗಳನ್ನು ನೋಡಿದರೆ ಅವರು ಯಾವುದೋ ಆಪತ್ತಿನಲ್ಲಿ ಸಿಕ್ಕಿಕೊಂಡಂತೆ ತೋರುತ್ತಿದೆ. ಭವನದೊಳಗೆ ಬರದೆ, ತಾನು ಬಂದ ದಾರಿಯಲ್ಲೇ ಹೋಗಲು ಒದ್ದಾಡುತ್ತಿರುವುದನ್ನು ಕಂಡರೆ ಇದರಲ್ಲೇನೋ ರಹಸ್ಯವಿರಲೇಬೇಕು. ಆದುದರಿಂದ ಇದು ಹೋದಲ್ಲಿಗೆ ನೀವೂ ಹೋಗಿ, ಏನು ನಡೆಯುವುದೋ ನೋಡಿಕೊಂಡು ಬನ್ನಿ" ಎಂದ ರಾಜಭಟರನ್ನು ಕುರಿತು. ರಾಜನು ಈ ರೀತಿ ಹೇಳುವಾಗ ಕುದುರೆ ಹಿಡಿತ ತಪ್ಪಿಸಿಕೊಂಡು ಹೋಗಲು ಅನುವಾಯಿತು. ರಾಜಭಟರು ಅದನ್ನು ಹಿಂಬಾಲಿಸಿದರು. ಆದರೆ ಮುಂದೆ ಹೋಗುತ್ತಿದ್ದ ಕುದುರೆ ರಾಜಭಟರಕಡೆ ತಿರುಗಿ 'ನೀವುನಿಲ್ಲಿ' ಎಂದಂತೆ ತಲೆ ಆಡಿಸಿತು.

ಇದನ್ನು ನೋಡಿ ರಾಜನಿಗೆ ಒಂದು ಆಲೋಚನೆ ಹೊಳೆಯಿತು. ಮಂತ್ರಿಯನ್ನು ಕರೆದು "ಇವರೆಲ್ಲ ಹಿಂಬಾಲಿಸುವುದು ಅಶ್ವಕ್ಕೆ ಇಷ್ಟವಿಲ್ಲವೆಂದು ತೋರುತ್ತದೆ. ಅವರೆಲ್ಲರನ್ನೂ ಹಿಂದಕ್ಕೆ ಕಳುಹಿಸಿ, ನೀವು ಮಾತ್ರ ಹೋಗಿ" ಎಂದ.

ಭಟರನ್ನು ಒಳಗೆ ಕಳುಹಿಸಿದಮೇಲೆ ಕುದುರೆ ಮುಂದಕ್ಕೆ ಹೆಜ್ಜೆಯಿಟ್ಟಿತು. ಆಗ ಮಂತ್ರಿ ಮಾತ್ರ ಅದನ್ನು ಹಿಂಬಾಲಿಸಿದ.

* * *

ನಮ್ಮ ಅವಳಿ ಸಹೋದರರೂ, ರಾಜಕುಮಾರಿಯರೂ ಹೇಗಿರುವರೋ ವಿಚಾರಿಸುವ:

ಸುದ್ದಿ ಮುಟ್ಟಿಸಿ ಬರುವೆನೆಂದ ಗಡ್ಡದವನು ಶ್ರಾವಸ್ತಿನಗರಕ್ಕೆ ಹೊರಟು ಹತ್ತು ದಿನಗಳಾದವು. ಇಷ್ಟರವರೆವಿಗೂ ಅವನು ಹಿಂತಿರುಗಿ



ಬಾರದಿರಲು ಅವಳ ಸಹೋದರರಿಗೆ ನಾನಾ ಯೋಚನೆಗಳುಂಟಾಯಿತು. ಕೊನೆಗೊಂದು ದಿನ ಉದಯನನು ತನ್ನ ಸಹೋದರರೊಂದಿಗೆ "ಪಾಪ, ಅವನು ಯಾವ ಆಪತ್ತಿನಲ್ಲಿ ಸಿಲುಕಿ ಕೊಂಡನೋ, ಏನೋ! ನಾನು ಶ್ರಾವಸ್ತಿ ನಗರಕ್ಕೆ ಹೋಗಿ ತಿಳಿದುಕೊಂಡು ಬರುತ್ತೇನೆ. ಅದುವರೆವಿಗೆ ನೀವು ಜಾಗರೂಕತೆಯಿಂದ ಇರಿ. ಅವಶ್ಯ ಕಂಡುಬಂದರೆ ಈ ಭಸ್ಮಗಳನ್ನು ಉಪಯೋಗಿಸಿಕೊಳ್ಳಿ" ಎಂದು ಅವರಿಗೆ ಸ್ವಲ್ಪ ಬಿಳಿ ಭಸ್ಮ, ಸ್ವಲ್ಪ ಕಪ್ಪು ಭಸ್ಮಕೊಟ್ಟು ನಿಶೀಥನ ಕುದುರೆಯನ್ನೇರಿ ಶ್ರಾವಸ್ತಿಗೆ ಹೊರಟ.

ಉದಯನನು ಹಾಗೇ ಒಂದು ರಾಜ್ಯದ ಮಧ್ಯ ಹಾದು ಹೋಗುತ್ತಿದ್ದಾನೆ. ದಾರಿಯಲ್ಲಿ ಒಂದೆಡೆ ಒಬ್ಬಾನೊಬ್ಬ ಅಂಧನು ಕೋಲಿನಿಂದ ತಡಕುತ್ತಾ ನಡೆದು, ಪಕ್ಕದಲ್ಲೇ ಇದ್ದ ಒಂದು ಹಳ್ಳದಲ್ಲಿ ಬಿದ್ದುಬಿಟ್ಟ. ಈ ದೃಶ್ಯ ಕಾಣಿಸಿದಕೂಡಲೇ ಉದಯನನು ತಕ್ಷಣ ಕುದುರೆಯಿಂದ ಇಳಿದು ಅಂಧನನ್ನು ಎಬ್ಬಿಸಿದ. ತನ್ನ ಬಳಿಯಿದ್ದ ಅಂಜನಗಳನ್ನು ಪ್ರಯೋಗಿಸಿದಕೂಡಲೇ ಆ ಅಂಧನಿಗೆ ಕಣ್ಣು ಬಂತು. ಮುದುಕ ಉದಯನನ್ನು ಮನಸಾರೆ ವಂದಿಸಿ, ತನ್ನ ಕೃತಜ್ಞತೆ ಸೂಚಿಸಿದನು. ತನ್ನ ಮನೆಗೆ ಬರುವಂತೆ ಬಲವಂತ ಮಾಡಿದ. ಉದಯನನು ಸರಿ ಎಂದು ಒಪ್ಪಿಕೊಂಡ.

ಮನೆ ಸೇರಿದಮೇಲೆ ಆ ವೃದ್ಧನು ಆ ಊರ ರಾಜನ ಸೇವಕನ ತಂದೆಯೆಂದು ತಿಳಿದು ಬಂದಿತು. ತನ್ನ ತಂದೆಗೆ ಈ ರೀತಿ ದೃಷ್ಟಿ ಲಭಿಸಿದುದನ್ನು ಕಂಡು, ಆ ಸೇವಕನು ತುಂಬಾ ಸಂತೋಷಪಟ್ಟ. ಬಾಯಿಂದ ಬಾಯಿಗೆ ಈ ಸಮಾಚಾರ ಹರಡಿ, ಅದು ರಾಜನ ಕಿವಿಗೂ ಬಿದ್ದಿತು.

ರಾಜನು ಭಟರನ್ನು ಕಳುಹಿಸಿ, ಉದಯನನನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡ. ಉದಯನನು ರಾಜನ ಮುಂದೆ ಹಾಜರಾದ. ಉದಯನನನ್ನು ರಾಜನು ಬಹು ವಿಧವಾಗಿ ಸತ್ಕರಿಸಿ, "ನಿನ್ನಂತಹ ಬುದ್ಧಿಮತಿಯನ್ನು ಈವರೆವಿಗೂ ನಾನು ಕಂಡಿಲ್ಲ. ನೀನು ನಮ್ಮ ಆಸ್ಥಾನದಲ್ಲಿದ್ದುಬಿಡಬೇಕು" ಎಂದ.

ಅದಕ್ಕೆ ಉದಯನನು "ಮಹಾರಾಜನೇ, ನೀವು ತೋರಿಸಿದ ಆದರ, ಅಭಿಮಾನಗಳನ್ನು ಮರೆಯಲಾರೆ. ಆದರೆ ನಾನು ಈಗ ಮುಖ್ಯ

ವಾದ ಕಾರ್ಯದಮೇಲೆ ಹೋಗುತ್ತಿದ್ದೇನೆ. ಅದನ್ನು ಮುಗಿಸಿಕೊಂಡು ಹಿಂತಿರುಗುವಾಗ ಅಗತ್ಯವಾಗಿ ಆಳುವ ಮಹಾಸ್ವಾಮಿಯವರ ದರ್ಶನ ಮಾಡಿಕೊಳ್ಳುತ್ತೇನೆ" ಎಂದ.

ರಾಜನು ಸಂತೋಷಗೊಂಡು, ಆತನನ್ನು ವೈಭವದಿಂದ ಕಳುಹಿಸಿಕೊಟ್ಟನು.

ಆತರುವಾಯ ಯಾವುದೇ ವಿಧವಾದ ಅವಾಂತರಗಳಿಲ್ಲದೆ, ಇನ್ನೊಂದು ವಾರಕ್ಕೆಲ್ಲಾ ಉದಯನ ಶ್ರಾವಸ್ತಿನಗರವನ್ನು ಸೇರಿಕೊಂಡ. ಆತನನ್ನು ನೋಡಿದಕೂಡಲೇ ರಾಜನು ಎದುರಾಗಿ ಬಂದು ಗಟ್ಟಿಯಾಗಿ ಅಪ್ಪಿಕೊಂಡ. ರಾಜಕುಮಾರಿಯರು ಸುರಕ್ಷಿತವಾಗಿರುವರೆಂದು ಹೇಳಿದ ಉದಯನ. ಸ್ವಲ್ಪ ದಣಿವು ತೀರಿಸಿಕೊಂಡಮೇಲೆ ಅಪ್ಸರವರೆವಿಗೂ ನಡೆದ ವಿಚಿತ್ರ ವಿಷಯಗಳೆಲ್ಲವನ್ನೂ ಮಣಿ ಪೋಣಿಸಿದಂತೆ ಹೇಳಿ" ನೀವು ನಿಶ್ಚಿಂತೆಯಾಗಿರಿ. ಶೀಘ್ರದಲ್ಲೇ ನಾವು ನಿಮ್ಮ ಕುವರಿಯರೊಂದಿಗೆ ಸುರಕ್ಷಿತವಾಗಿ ಹಿಂತಿರುಗಿ ಬರುವೆವು" ಎಂದು ಸಮಾಧಾನ ಹೇಳಿದ. ಈ ಸುದ್ಧಿ ಕೇಳಿದಕೂಡಲೇ ರಾಜನ ಹೃದಯವು ಸಂತೋಷದಿಂದ ತುಂಬಿ ಉಕ್ಕಿತು. ರಾಣಿಯ ಮುಖ ಅರಳಿತು. ರಾಜ್ಯದಲ್ಲಿ ಪ್ರಜೆಗಳೆಲ್ಲಾ ಆನಂದಸಾಗರದಲ್ಲಿ ಮುಳುಗಿದರು.

ಮರುದಿನವೇ ಉದಯನನು ವಿಳಂಬ ಮಾಡದೆ ರಾಜನ ಅಪ್ಪಣೆ ಪಡೆದು, ತಾಯಿಯ ಆಶೀರ್ವಾದ ಹೊಂದಿ, ಮಾಯಾ ಭವನಕ್ಕೆ ಹೊರಟ.

ಮುಂದಿನ ವಾರ ಉದಯನ ಮಾಯಾ ಭವನ ಸೇರಿಕೊಂಡ. ಸೇರಿಕೊಂಡನೇನೋ ಸರಿ, ಆ ಕ್ಷಣ ಆತನ ಕಣ್ಣಿಗೆ ಬಿದ್ದ ದೃಶ್ಯ, ಉದಯನನ ಮೈ ಕಂಪಿಸುವಂತೆ ಮಾಡಿತು. ಅಷ್ಟೊಂದು ಭೀಕರ ದೃಶ್ಯವೇನಿರಬಹುದು?

ತೋಟದಲ್ಲಿದ್ದ ಒಂದು ಮರಕ್ಕೆ ಐದು ನೇಣು ಹಗ್ಗಗಳು ಜೋಲಾಡುತ್ತಿದ್ದವು. ಸಂಧ್ಯಾ ನಿಶೀಥರೂ, ಗಡ್ಡದವನೂ, ಶ್ರಾವಸ್ತಿ ನಗರದ ರಾಜಭಟರೂ ಒಂದು ಸಾಲಿನಲ್ಲಿ ಕುಳಿತಿದ್ದಾರೆ. ಅವರೆಲ್ಲರ ಕೈಕಾಲುಗಳು ಬಂಧಿಸಲ್ಪಟ್ಟಿದೆ. ಎದುರಾಗಿ ಹುಲಿಯಂತೆ ರಾಕ್ಷಸನಿಂತಿದ್ದಾನೆ.

( ಇನ್ನೂ ಇದೆ )






# ಉದರನಿಮಿತ್ತ

ಬಹಳ ಕಾಲದ ಹಿಂದೆ ಒಬ್ಬ ರಾಜನಿದ್ದ. ಆತನ ಹತ್ತಿರ ನಾಗಣ್ಣ ಎಂಬ ನೌಕರನಿದ್ದ. ನಾಗಣ್ಣ ತಮಾಷೆಯಾಗಿ ಹರಟೆಕೊಚ್ಚುತ್ತಾ, ರಾಜನನ್ನು ನಗಿಸುತ್ತಿದ್ದ. ಆದ್ದರಿಂದ ಅವನೆಂದರೆ ರಾಜನಿಗೆ ತುಂಬಾ ಇಷ್ಟ.

ರಾಜನಿಗೆ ನೌಕರರಿದ್ದರೆ ರಾಣಿಗೆ ಮಾತ್ರ ಇರುವುದಿಲ್ಲವೆ? ಆಕೆಯ ಹತ್ತಿರ ಚಂದ್ರಿಕ ಎಂಬ ಪರಿಚಾರಿಕೆ ಇದ್ದಳು. ಚಂದ್ರಿಕ ಸಹ ನಾಗಣ್ಣನಂತೆಯೇ ತಮಾಷೆಯಾಗಿ ಮಾತನಾಡುತ್ತಾ ರಾಣಿಗೂ ಸಂತೋಷವುಂಟು ಮಾಡುತ್ತಿದ್ದಳು. ಆದುದರಿಂದ ಚಂದ್ರಿಕ ಅಂದರೆ ಆಕೆಗೆ ಅಮಿತ ಪ್ರೀತಿ.

"ನಮ್ಮ ಚಂದ್ರಿಕ ಬುದ್ಧಿವಂತಳು" ಅಂತ ರಾಣಿಯೂ, "ನಮ್ಮ ನಾಗಣ್ಣ ಮೇಧಾವಿ" ಅಂತ ರಾಜನೂ ಒಂದುದಿನ ಪುರುಸತ್ತಾಗಿರುವಾಗ ಹರಟೆ ಹೊಡೆಯಲು ಪ್ರಾರಂಭಿಸಿದರು. ಆ ದಂಪತಿಗಳ ವಿವಾದ ಮುಗಿಯದೆ, ಮಂತ್ರಿಗೆ ಹೇಳಿ ಕಳುಹಿಸಿ "ಅಯ್ಯಾ ಮಂತ್ರಿ ನಮ್ಮ ಆಸ್ಥಾನದಲ್ಲಿ ನಾಗಣ್ಣ, ಚಂದ್ರಿಕ ಇದ್ದಾರಲ್ಲವೇ. ಅವರಿಬ್ಬರಲ್ಲಿ ಯಾರು ಹೆಚ್ಚು ಬುದ್ಧಿವಂತರೋ ಹೇಳು" ಎಂದರು. ಮಂತ್ರಿ ದೀರ್ಘಾಲೋಚನೆ ಮಾಡಿ "ಇಬ್ಬರೂ ಬುದ್ಧಿವಂತರು" ಎಂದುಬಿಟ್ಟ.

ಚಂದ್ರಿಕೆಗೆ ಮದುವೆ ವಯಸ್ಸಾಯಿತು. ರಾಣಿ ಮಂತ್ರಿಯನ್ನು ಬರಮಾಡಿಕೊಂಡು "ನಮ್ಮ ಚಂದ್ರಿಕೆಗೆ ಅನುರೂಪನಾದ ವರನನ್ನು ನೋಡಬೇಕು. ಈ ಭಾರ ನಿಮ್ಮ ಮೇಲಿದೆ" ಎಂದಳು. ನಾಗಣ್ಣನಿಗೂ ವಿವಾಹ ವಯಸ್ಸು ಬಂದಿತ್ತಾದ್ದರಿಂದ ರಾಜ ಮಂತ್ರಿಯೊಂದಿಗೆ "ಮಂತ್ರೀ, ಮಂತ್ರೀ, ನಮ್ಮ ನಾಗಣ್ಣನಿಗೆ ತಕ್ಕ ಹುಡುಗಿಯನ್ನು ಹುಡುಕುವ ಬಾಧ್ಯತೆ ನಿನ್ನಮೇಲಿದೆ" ಎಂದ. "ಚಂದ್ರಿಕೆಗೆ ತಕ್ಕ ವರ ನಾಗಣ್ಣ" ಎಂದು ರಾಣಿಗೂ, ನಾಗಣ್ಣನಿಗೆ ತಕ್ಕ ವಧು ಚಂದ್ರಿಕೆ" ಎಂದು ರಾಜನಿಗೂ ಹೇಳಿ, ವೈಭವದಿಂದ ಅವರಿಬ್ಬರಿಗೂ ವಿವಾಹ ಮಾಡಿಸಿದ ಮಂತ್ರಿ.

ಕೆಲ ದಿನಗಳಾದಮೇಲೆ ನಾಗಣ್ಣನ ಹತ್ತಿರ ವಿದ್ದ ಹಣವೆಲ್ಲ ಮುಗಿಯಿತು. ಹೇಗೆ ಮತ್ತೆ

ಎಸ್. ಎಂ. ನಾರಾಯಣರಾವ್, ಬೆಂಗಳೂರು.



ಎಲ್ಲಾ ಕರ್ಮ. ಯಾರು ತಪ್ಪಿಸ್ತಾರೆ" ಎಂದು ಸಮಾಧಾನ ಹೇಳಿ, ಒಂದು ಥೈಲಿ ತುಂಬಾ ಹಣ ಕೊಟ್ಟು ಕಳುಹಿಸಿದಳು ರಾಣಿ.

ಮೂಟೆಯೊಂದಿಗೆ ಮನೆಗೆ ಹೋದ ಕೂಡಲೇ ನಾಗಣ್ಣ ಅವಳ ಚತುರತೆಗೆ ಮೆಚ್ಚಿ ಕೊಂಡು, "ಇನ್ನು ನನ್ನ ಜಾಣತನ ನೋಡು" ಎಂದು ಹೇಳಿ, ತುವಾಲನ್ನು ಬಾಯಿಯಲ್ಲಿ ತುರುಕಿಕೊಂಡು, ಬಿಕ್ಕಿ ಬಿಕ್ಕಿ ಅಳುತ್ತಾ ರಾಜನ ಹತ್ತಿರ ಹೋದ. ರಾಜ ಅವಾಕ್ಕಾದ. "ಏನೋ, ಏನಾಯಿತು? ಏಕೆ ಹಾಗೆ ಅಳುತ್ತಿದ್ದೀಯೇ?" ಎಂದು ಕೇಳಿದ. "ಇನ್ನೇನಿದೆ ಸ್ವಾಮಿ. ಯಾವೊಂದು ಚಿಂತೆಯೂ ಇಲ್ಲದೆ ಸುಖವಾಗಿ ಕಾಲ ಕಳೆಯುತ್ತಿದ್ದರೆ ನನಗೆ ಮದುವೆ ಅಂತ ಹೇಳಿ ಆ ಹುಡುಗಿಯನ್ನು ಕೊರಳಿಗೆ ಕಟ್ಟಿದಿರಿ. ಅವಳಿಗೆ ಅಕಸ್ಮಾತ್ ಜ್ವರ ಬಂದು, ಸತ್ತು ಹೋದಳು. ನನ್ನ ಸಂಸಾರವನ್ನು ನಡುನೀರಿನಲ್ಲಿ ಬಿಟ್ಟು ಹೋದಳು. ಇದ್ದ ಹಣವೆಲ್ಲಾ ವೈದ್ಯ ಕಿತ್ತುಕೊಂಡು ಹೋದ" ಎಂದು ಪ್ರಲಾಪಿಸಿದ.

ರಾಜನು ಅವನ ವೈಖರಿ ಕಂಡು ನಿಜವೆಂತಲೇ ನಂಬಿ "ಅಳಬೇಡಕಣೋ, ಧೈರ್ಯ ತಂದುಕೋ" ಎಂದು ಸಮಾಧಾನಮಾಡಿ ಒಂದು ಸಾವಿರ ವರಹ ಅವನಿಗಿತ್ತು ಕಳುಹಿಸಿದ.

ತನ್ನ ಪ್ರೀತಿಯ ದಾಸಿ ಸತ್ತು ಹೋದುದರಿಂದ ರಾಣಿ ದುಃಖಪಡುತ್ತಿರಬಹುದೆಂದು ಕೊಂಡು ರಾಜನು ಆಕೆಗೆ ಸಮಾಧಾನ ಹೇಳಲೋಸುಗ ಅಂತಃಪುರಕ್ಕೆ ಹೋದ. ರಾಣಿ

ನಾವು ಜೀವಿಸುವುದು ಎಂದು ಆ ಕುಶಲಮತಿಗಳಾದ ಸತಿಪತಿಯರು ಯೋಚಿಸಿ ಕೊನೆಗೊಂದು ಉಪಾಯ ಹೂಡಿದರು. ಚಂದ್ರಿಕ ತಕ್ಷಣ ಎದ್ದು ತಲೆ ಕೆದರಿಕೊಂಡು ಅಳುತ್ತಾ ಅಂತಃಪುರಕ್ಕೆ ಹೋಗಿ "ಇನ್ನೇನಿದೆ ತಾಯಿ. ಮನೆ ಹಾಳಾಯಿತು. ನಮ್ಮ ಯಜಮಾನರು ತೀರಿಕೊಂಡರು. ಹಾಯಾಗಿ ನಿಮ್ಮ ಪಾದಗಳಬಳಿ ಸೇವೆ ಮಾಡಿಕೊಂಡಿದ್ದವಳಿಗೆ, ಮದುವೆ ಅಂತ ತಂದಿಟ್ಟಿರಿ. ಎಲ್ಲಾ ಮೂರು ದಿನದ ಮುಚ್ಚಟೆ ಆಯಿತು. ನನಗಿನ್ನೇನು ಗತಿ" ಎಂದು ಗೋಳೋ ಅಂತ ಅತ್ತಳು.

ಇದೆಲ್ಲಾ ನಿಜವೆಂತಲೇ ನಂಬಿ "ಅತ್ತರೇನು ಬಂತು ಲಾಭ, ಚಂದ್ರಿಕ. ಏನೋ ಸುಖಪಡುವೆಯೆಂದು ಮಾಡಿದೆನೇ ಹೊರತು ಈ ರೀತಿ ಆಗುವುದೆಂದು ಕನಸು ಕಂಡಿದ್ದೆನೇ?



ಕಣ್ಣಿಗೆ ಬಿದ್ದಕೂಡಲೇ "ಪಾಪ, ಚಂದ್ರಿಕ ಸದಾ ನಗುತ್ತಾ ಎಲ್ಲರನ್ನೂ ನಗಿಸುತ್ತಿದ್ದಳು" ಎಂದು ಸಹಾನುಭೂತಿ ತೋರಿಸಿದ. "ಹೌದು. ಆದರೇನು. ಅರ್ಧಾಯುಸ್ಸಿನವ ನನ್ನು ಕೊಟ್ಟು ಮದುವೆ ಮಾಡಿ ಅವಳಿಗೆ ವೈಧವ್ಯ ತಂದೆವು. ಮಂತ್ರಿ ಹೇಳಿದನಲ್ಲಾ ಎಂದು ಅವಸರಪಟ್ಟೆವು. ಜಾತಕ ತೋರಿಸಿ, ಅವನ ಆಯುಸ್ಸು ಎಷ್ಟು ಅಂತ ತಿಳಿದುಕೊಳ್ಳ ಬೇಕಾಗಿತ್ತು" ಎಂದಳು ರಾಣಿ. ಈ ಮಾತು ಕೇಳಿ ರಾಜ ಆಶ್ಚರ್ಯಪಟ್ಟ. "ಅದೇನದು. ಚಂದ್ರಿಕೆ ಹೋದರೆ ನಾಗಣ್ಣ ಅಲ್ಪಾಯುಸ್ಸಿನವ ಎಂದು ಹೇಳುತ್ತಿರುವೆಯಲ್ಲಾ ಆಶ್ಚರ್ಯವಾಗಿದೆ" ಎಂದ.

"ಸರಿ, ಸರಿ. ಚಂದ್ರಿಕೆ ಸತ್ತು ಹೋದಳು ಅಂತ ಯಾರು ಹೇಳಿದರು. ಅವಳು ಸತ್ತು ಹೋಗಿದ್ದರೆ ಪೀಡೆ ತೊಲಗುತಿತ್ತು. ಗಂಡ ಹೋದಮೇಲೆ ಬದುಕುವುದಕ್ಕಿಂತ ಸಾಯುವುದು ಎಷ್ಟೋ ಉತ್ತಮ. ಚಂದ್ರಿಕೆ ತನಗೆ ಈ ನಿರ್ಭಾಗ್ಯ ಬದುಕು ಬಂತೆಂದು ಅಳುತ್ತಿದ್ದರೆ ಒಂದು ತೈಲಿ ಹಣ ಕೊಟ್ಟು ಕಳುಹಿಸಿದೆ" ಎಂದಳು ರಾಣಿ. "ಅದೇನು ಮಾತು? ಹೆಂಡತಿ ಸತ್ತು ಹೋದಳು ಅಂತ ಬಂದು ಬಿಕ್ಕಿ ಬಿಕ್ಕಿ ಅಳುತ್ತಿದ್ದರೆ ನಾಗಣ್ಣನಿಗೆ ಈಗಲೇ ಅಲ್ಲವೆ ನಾನು ಸಾವಿರ ವರಹಗಳ ನಿತ್ತು ಕಳುಹಿಸಿದೆ. ಅವನು ಸತ್ತುಹೋದ ಎನ್ನುವೆಯಲ್ಲಾ ನೀನು?" ಎಂದ ರಾಜ.

"ನಾಗಣ್ಣ ಸತ್ತ" ಎಂದು ರಾಣಿಯೂ, "ಚಂದ್ರಿಕ ಸತ್ತು ಹೋದಳು" ಅಂತ ರಾಜ ಹಠ ಹಿಡಿದು ಸ್ವಲ್ಪ ಹೊತ್ತು ವಾದಿಸಿದರು. ಕೊನಗೆ ಒಬ್ಬ ನೌಕರನನ್ನು ಕೂಗಿ "ನಾಗಣ್ಣನ ಮನೆಗೆ ಹೋಗಿ ಅವರಿಬ್ಬರಲ್ಲಿ ಯಾರು ಸತ್ತು ಹೋದರೋ ತಿಳಿದುಕೊಂಡು ಬಾ" ಎಂದು ರಾಜ ಕಳುಹಿಸಿದ.

ರಾಜನ ಸೇವಕನು ಬರುತ್ತಿರುವನೆಂಬ ವಿಷಯ ತಿಳಿದು ನಾಗಣ್ಣ ಚಂದ್ರಿಕೆಗೆ ಮುಸುಕು ಹಾಕಿಕೊಂಡು ಮಲಗಿಕೊಳ್ಳುವಂತೆ ಹೇಳಿ, ತಾನು ಪಕ್ಕದಲ್ಲಿ ಕುಳಿತುಕೊಂಡು ಅಳುವುದಕ್ಕೆ ಪ್ರಾರಂಭಿಸಿದ. ನೋಡಲು ಬಂದ ನೌಕರನು ಏನೂ ಕೇಳದಯೇ ಹಿಂದಿರುಗಿ "ಚಂದ್ರಿಕೆ ಸತ್ತುಹೋದಳು" ಎಂದ. ಆ ಮಾತು ಕೇಳಿ ರಾಣಿಗೆ ಕೋಪ ಬಂತು. ಆ ನೌಕರನ ಮಾತಿನಲ್ಲಿ ನಂಬಿಕೆಯುಂಟಾಗದೆ "ನಿಜ ತಿಳಿದುಕೊಂಡು

ಬಾರೇ" ಎಂದು ತನ್ನ ದಾಸಿಯನ್ನು ಕಳು ಹಿಸಿದಳು. ಈ ರೀತಿ ನಡೆಯುವುದೆಂದು ಮೊದಲೇ ಅರಿತಿದ್ದ ಚಂದ್ರಿಕೆ ಈ ಬಾರಿ ನಾಗಣ್ಣನನ್ನು ಮಲಗಿಸಿ, ತಾನು ಪಕ್ಕದಲ್ಲಿ ಕುಳಿತು ರೋಧಿಸುತ್ತಿದ್ದಳು. ದಾಸಿ ನೋಡಿ ಕೊಂಡು ಬಂದು "ನಾಗಣ್ಣನೇ ಸತ್ತು ಹೋದ" ಎಂದಳು. ಈ ಮಾತುಗಳನ್ನು ನಂಬಲಾರದೆ ರಾಜ, ರಾಣಿಯನ್ನು ಸಂಗಡ ಕರೆದುಕೊಂಡು ಸ್ವತಃ ನಾಗಣ್ಣನ ಮನೆಗೆ ಹೋದ.

ರಾಜ ಮತ್ತು ರಾಣಿ ಬರುತ್ತಿರುವರೆಂದು ತಿಳಿದಕೂಡಲೇ ಚಂದ್ರಿಕ ಮತ್ತು ನಾಗಣ್ಣ ಇಬ್ಬರೂ ಸತ್ತವರಂತೆ ತಲಾ ಒಂದೊಂದು ಕಡೆ ಮುಸುಕು ಎಳೆದುಕೊಂಡು ಮಲಗಿ ಕೊಂಡರು. "ನಾಗಣ್ಣ ಹೆಂಡತಿ ಮರಣ ಹೊಂದಿದಳೆಂಬ ದುಃಖದಿಂದ ಯಾವುದೋ ವಿಷ ಕುಡಿದು ಸತ್ತಿರಬೇಕು" ಎಂದ ರಾಜ. "ಅದೇನು ಮಾತೂ ಅಂದ್ರೆ, ಚಂದ್ರಿಕೆ ಪತಿ ವ್ರತೆಯಾದುದರಿಂದ ಪತಿ ಸತ್ತಮೇಲೆ ಜೀವಿ ಸುವುದೇಕೆಂದು ಪ್ರಾಣ ಬಿಟ್ಟಿರಬಹುದು" ಎಂದಳು ರಾಣಿ.

ಮತ್ತೆ ಶುರುವಾಯಿತು ವಾದ. ಇವರಿಬ್ಬ ರಲ್ಲಿ ಯಾರು ಮೊದಲು ಸತ್ತು ಹೋದ ರೆಂಬುದನ್ನು ತಿಳಿಸಿದವರಿಗೆ ಒಂದು ಅಗ್ರ ಹಾರ ಬಹುಮಾನವಾಗಿ ಕೊಡುತ್ತೇವೆ" ಎಂದ ರಾಜ. ಆ ಮಾತು ಕೇಳಿದಕೂಡಲೇ ನಾಗಣ್ಣ ತಟಕ್ಕನೆ ಎದ್ದು ರಾಜನ ಪಾದಗಳ ಮೇಲೆ ಬಿದ್ದು "ನಾನೇ ಸ್ವಾಮಿ ಮೊದಲು ಸತ್ತುಹೋದವನು" ಎಂದ.

ಚಂದ್ರಿಕೆ ಮಾತ್ರ ಏನು ಕಡಿಮೆ? ಅವ ಳೆದ್ದು ರಾಣಿಯ ಪಾದಗಳಬಳಿ ಸೇರಿ "ಅಮ್ಮಾ ಮೊದಲು ನಾನೇ ಸತ್ತುಹೋದೆ" ಎಂದು ಹೇಳಿದಳು. ಅವರಿಬ್ಬರೂ ಜೀವಿಸಿರುವು ದನ್ನು ನೋಡಿ "ಇದೇನು ಹೋಗೋ ಕಾಲ ವೋ ನಿಮಗೆ. ಬದುಕಿದ್ದೇ ಸತ್ತಂತೆ ನಟಿಸಿ ದಿರಿ" ಎಂದರು ಎಲ್ಲರೂ.

"ಉದರನಿಮಿತ್ತಂ ಬಹುಕೃತವೇಷಂ" ಎಂದ ನಾಗಣ್ಣ. "ಕೋಟಿ ವಿದ್ಯೆಗಳೂ ಗೇಣು ಹೊಟ್ಟೆಗಾಗಿ" ಎಂದಳು ಚಂದ್ರಿಕೆ. ಅಲ್ಲಿದ್ದವರೆಲ್ಲಾ ನಕ್ಕರು. ರಾಜನು ನಾಗಣ್ಣನಿ ಗೊಂದು ಅಗ್ರಹಾರ ಕೊಟ್ಟ; ಚಂದ್ರಿಕೆಗೆ ಒಂದು ಅಗ್ರಹಾರ ಕೊಟ್ಟಳು ರಾಣಿ.





# ಕೃತಘ್ನ

ವೇಮಗಿರಿ ಅಂತ ಒಂದು ಊರು. ಅಲ್ಲಿ ಗೌರಮ್ಮ ಅಂತ ಒಬ್ಬ ಬಡ ಜೀವಿಯೊಬ್ಬಳಿದ್ದಳು. ಹರಕು ಅರಿವೆಗಳನ್ನು ಸುತ್ತಿಕೊಂಡಿರುವ ಅಸ್ಥಿಪಂಜರ ಆ ಊರಲ್ಲಿ ಕಾಣಿಸಿದರೆ ಆಕೆಯೇ ಗೌರಿ ಎಂದು ಗುರುತು ಹಿಡಿಯಬಹುದಾಗಿತ್ತು. ನಿಜವಾಗಿ ಆಕೆಯ ತಾಪತ್ರಯ ನೋಡಿದರೆ ಯಾರಿಗಾದರೂ ಆಶ್ಚರ್ಯವುಂಟಾಗುತ್ತದೆ.

ಯಾವಾಗ ಏಳುವಳೋ ಏನೋ, ನಾಲ್ಕೈದು ಮನೆಗಳ ಮುಸುರೆ ಕೆಲಸ ಮಾಡುವಳು. ಇನ್ನೂ ಕತ್ತಲಾಗಿರುವಾಗಲೇ ಹಾಲು ಕರೆದುಕೊಂಡು ಹೋಗಿ ವಾಡಿಕೆ ಮನೆಗಳಿಗೆ ಕೊಟ್ಟು ಬರುವಳು. ದೊಡ್ಡ ಮನುಷ್ಯರ ಮನೆಗಳಲ್ಲಿ ಅಡಿಗೆ ಮಾಡುವಳು. ಅಲ್ಲಿ ಆಕೆಯ ತಿಂಡಿಗೆ ಕಳೆದು ಏನೋ ಒಂದೆರಡು ಪುಡಿಕಾಸು ಕೊಡುವರು. ಕುಟ್ಟಲು ಹೋಗಿ ನುಚ್ಚು, ತವುಡು ತೆಗೆದುಕೊಂಡು ಬರುವಳು. ಬೆಳಕಿರುವಾಗಲೇ ಊರಾಚೆ ಹೋಗಿ ಕಟ್ಟಿಗೆ ಆರಿಸಿಕೊಂಡು ಬರುತ್ತಾಳೆ. ದಾರಿಯಲ್ಲಿ ಕಾಣಿಸಿದ ಸಗಣಿ ಎತ್ತಿಕೊಂಡು ಬಂದು ಬೆರಣಿ ತಟ್ಟುವಳು.

ಈ ರೀತಿ ಗೌರಿ ಒಂದು ಕ್ಷಣವಾದರೂ ವಿರಾಮವಿಲ್ಲದೆ ಇಷ್ಟು ಶ್ರಮಪಡುವುದಾದರೂ ಏಕೆ? ಬೆರಣಿ ಮಾರಿ, ಕಟ್ಟಿಗೆ ಮಾರಿ, ದಾಸಿಗಿಂತಲೂ ಹೀನವಾಗಿ ಬೆವರು ಸುರಿಸಿ ಸಂಪಾದಿಸುವ ಈ ಹಣವೆಲ್ಲಾ ಯಾರಿಗಾಗಿ?" ಎಂದು ಕೇಳುತ್ತಿರುತ್ತಾರೆ ಬಹಳ ಜನ.

ಆಕೆಗೆ ರಾಮಯ್ಯ ಅಂತ ಒಬ್ಬನೇ ಒಬ್ಬ ಮಗ. ಅವನನ್ನು ಸಲುಹಲೋಸುಗವಾಗಿ, ಗೌರಿ ಈ ತಾಪತ್ರಯವೆಲ್ಲಾ ಪಡುತ್ತಿದ್ದಾಳೆ. ರಾಮಯ್ಯ ಅಭಿವೃದ್ಧಿ ಹೊಂದಬೇಕು, ತಮ್ಮ ವಂಶದ ಹೆಸರು ಉಳಿಸಬೇಕು, ಅಂತ ಗೌರಿಯ ಆಕಾಂಕ್ಷೆ. ಇದಕ್ಕಾಗಿ ಆಕೆ ಹೊಟ್ಟೆ ಕಟ್ಟಿ, ಹರಕು ಅರಿವೆ ಉಟ್ಟು, ಕಾಲಕ್ಷೇಪ ಮಾಡುತ್ತಾ ಮುಂಜಾವಿನಿಂದ ಸಂಜೆವರೆವಿಗೆ ಕಷ್ಟಪಡುತ್ತಿದ್ದಳು. ಈ ಅಭಿಲಾಷೆಯಿಂದ ಗೌರಿ ಎಲ್ಲ ಪಾಡುಪಟ್ಟೂ ಮಗನನ್ನು ಕಾಪಾಡಿಕೊಂಡು ಬರುತ್ತಿದ್ದಳು. ಆದರೆ

ಆರ್. ರಂಗನಾಥಯ್ಯ, ಬಳ್ಳಾರಿ.



ತಾಯಿ ಮಮತೆ ತೋರಿದಷ್ಟೂ, ರಾಮಯ್ಯ ದುಬಾರಿಯಾಗಿ ಖರ್ಚು ಮಾಡಲಾರಂಭಿಸಿದ. ತಾನು ತಿನ್ನದಿದ್ದರೂ, ಮಗನಿಗೆ ಆಕೆ ರುಚಿ ರುಚಿಯಾದ ಅಡಿಗೆ ಮಾಡಿಡುವಳು. ಕೇಳಿದ ಬಟ್ಟೆ ಕೊಂಡುಕೊಡುವಳು. ಆದರೆ 'ನನ ಗಾಗಿ ತಾಯಿ ಇಷ್ಟು ಕಷ್ಟಪಟ್ಟು ಸಂಪಾದಿಸು ತ್ತಿರುವಳಲ್ಲಾ, ನಾನು ಜಾಗರೂಕತೆಯಿಂದ ಮಿತವ್ಯಯವಾಗಿ ಕಾಲಕ್ಷೇಪ ಮಾಡಿ ಆಕೆಯ ಕಷ್ಟ ತುಸವಾದರೂ ಕಡಿಮೆ ಮಾಡಬೇಕು' ಎಂಬ ಆಲೋಚನೆ ರಾಮಯ್ಯನಿಗೆ ಇಲ್ಲ ದಾಯಿತು. ಒಂದು ಮಾತಿನಲ್ಲಿ ಹೇಳಬೇಕೆಂ ದರೆ ಅವನು ತನ್ನ ಇಷ್ಟಾನುಸಾರವಾಗಿ ತಿಂದು, ತಿರುಗಾಡುತ್ತಿದ್ದ.

ಮಗ ಈ ರೀತಿ ಹಣ ಪೋಲುಮಾಡಿ ದಷ್ಟೂ ಗೌರಿಗೆ ಸಂಭ್ರಮವೇ ಹೊರತು ಆಕೆ ಎಂದೂ ಒಂದು ಬಿರುನುಡಿ ಆಡಲಿಲ್ಲ. 'ಹೋಗಲಿ ಬಿಡು. ದೊಡ್ಡವನಾದಮೇಲೆ ಬುದ್ಧಿ ಬರುತ್ತೆ' ಎಂದು ಸಹನೆಯಿಂದಿರು ತ್ತಿದ್ದಳು. ವಯಸ್ಸು ಆದಂತೆ ರಾಮಯ್ಯನಿಗೆ ಬುದ್ಧಿ ಬರುವ ಬದಲು ತುಂಟತನ ಹೆಚ್ಚಾಗುತಿತ್ತು.

ಹದಿನಾರು ವರ್ಷಕ್ಕೆಲ್ಲಾ ರಾಮಯ್ಯ ಸ್ಕೂಲು ಫೈನಲ್ ಕ್ಲಾಸಿನಲ್ಲಿ ಪ್ರಥಮಶ್ರೇಣಿ ಯಲ್ಲಿ ತೇರ್ಗಡೆ ಹೊಂದಿದ. ಇದಕ್ಕೆ ತಾಯಿ ತುಂಬಾ ಸಂತಸಗೊಂಡಳು. ಅವನಿಗಾಗಿ ಆಕೆ ಮತ್ತಷ್ಟು ಕಷ್ಟಪಡಲು ಪ್ರಾರಂಭಿಸಿದಳು. ಮತ್ತೆ ನಾಲ್ಕು ವರ್ಷ ಓದಿ ರಾಮಯ್ಯ ಬಿ. ಎ. ಪರೀಕ್ಷೆಯಲ್ಲೂ ಉತ್ತೀರ್ಣನಾದ. ಇನ್ನು ಗೌರಿಯ ಆನಂದಕ್ಕೆ ಮೇರೆಯೇ ಇಲ್ಲ. 'ಇನ್ನೇನು ನನ್ನ ಮಗ ದೊಡ್ಡ ಹುದ್ದೆ ಮಾಡು ತ್ತಾನೆ. ತೈಲಿಗಟ್ಟಲೆ ಹಣ ತಂದು ಸುರಿಸು ತ್ತಾನೆ. ನನ್ನ ಕಷ್ಟಗಳೆಲ್ಲಾ ಮುಗಿಯಿತು. ನಾನಿನ್ನು ದೇಹ ಶ್ರಮ ಪಡಬೇಕಾಗಿಲ್ಲ' ಎಂದುಕೊಂಡಳು.

* * *

ವೇಮಗಿರಿಯ ಜಮೀನುದಾರರು ಬಂಗಾ ರಯ್ಯ. ಆತನಿಗೆ ವರ್ಷಕ್ಕೆ ಒಂದು ಲಕ್ಷ ರೂಪಾಯಿ ವರಮಾನ ಬರುತಿತ್ತು. ಆದರೇನು ಲಾಭ. ಬರುವ ಆದಾಯವನ್ನು ಸರಿಯಾಗಿ ನೋಡಿಕೊಳ್ಳುವ ದಕ್ಷತೆಯಿಲ್ಲ. ಆದ್ದರಿಂದ ತನ್ನ ವ್ಯವಹಾರಗಳನ್ನು ನೋಡಿಕೊಳ್ಳಲು ನಂಬಿಕೆಯಾದ ಮನುಷ್ಯನೊಬ್ಬನನ್ನು

ತೋರಿಸಿ ಎಂದು ಸ್ನೇಹಿತರಿಗೆಲ್ಲಾ ಹೇಳು ತ್ತಿದ್ದ.

ಬಂಗಾರಯ್ಯನ ಆಪ್ತಸ್ನೇಹಿತ ರಾಘವಯ್ಯ ಎಷ್ಟೋ ಜನರನ್ನು ಕರೆದುಕೊಂಡು ಬಂದು ತೋರಿಸಿದ. ಬಂಗಾರಯ್ಯನಿಗೆ ಯಾರೂ ಸರಿ ತೋರಲಿಲ್ಲ. ಆಗಲೇ ಬಿ. ಎ. ಪರೀಕ್ಷೆಯಲ್ಲಿ ಪ್ಯಾಸಾಗಿದ್ದ ರಾಮಯ್ಯನನ್ನೂ ತೋರಿಸಿದ. ರಾಮಯ್ಯ ನೋಡಲು ಸುರೂಪಿ; ಸೂಟಿಯಾದ ಹುಡುಗ; ವಿದ್ಯಾವಂತ. ವೇಷ ಭಾಷೆಗಳಿಂದ ಆಕರ್ಷಿಸುವ ಶಕ್ತಿಸ್ಯಾಮರ್ಥ್ಯ ವುಳ್ಳವನು. ಇಂಥಹ ರಾಮಯ್ಯನನ್ನು ನೋಡಿದಕೂಡಲೇ ಬಂಗಾರಯ್ಯ ಮಾರು ಹೋದ. ಇಂದಿಗೆ ಯೋಗ್ಯನಾದ ಹುಡುಗ ಸಿಕ್ಕಿದನೆಂದು ಆತನು ಸಂತೋಷಗೊಂಡ.

ಆದರೆ ಒಂದು ದೊಡ್ಡ ಜಮೀನುದಾರಿಕೆಯನ್ನು ಏಕಾಏಕಿ ಒಬ್ಬನಿಗೆ ಒಪ್ಪಿಸುವುದೆಂದರೆ ಸುಲಭವಾದ ಕಾರ್ಯವೇ? ಹುಡುಗನ ಸ್ಥಿತಿಗತಿಗಳನ್ನು ಸ್ವತಃ ತಿಳಿಯಬೇಕೆಂದು ಅವರ ಮನೆಗೆ ಹೊರಟ ಬಂಗಾರಯ್ಯ. ದಿಕ್ಕಿಲ್ಲದ ಪಕ್ಷಿ ಗೌರಿ ಮನೆಯ ಮುಂದೆ ಬೆರಣಿ ತಟ್ಟುತ್ತಿದ್ದಳು. ಮನೆಗೆ ಬಂದ ದೊಡ್ಡ ಮನುಷ್ಯನನ್ನು ಕಂಡಕೂಡಲೇ, "ಲೋ ಮಗೂ, ರಾಮಯ್ಯ" ಎಂದು ಕೂಗಿದಳು.

ರಾಮಯ್ಯ ಟಾಕುಠೀಕಾಗಿ ಹೊರಗೆ ಬಂದು ಬಂಗಾರಯ್ಯನನ್ನು ತನ್ನ ಕೋಣೆಗೆ ಕರೆದುಕೊಂಡು ಹೋದ. ಸಾಹೇಬರ ಬಂಗಲೆಗಳಲ್ಲಿರುವಂತೆ ಆ ಕೊಠಡಿ ಸುಸಜ್ಜಿತವಾಗಿದೆ.




ಹುಡುಗನ ತಿಳುವಳಿಕೆಗೆ ಬಂಗಾರಯ್ಯ ಆಶ್ಚರ್ಯಪಟ್ಟ. "ನಮ್ಮ ಜಮೀನುದಾರಿಗೆ ನಿನ್ನನ್ನು ಮ್ಯನೇಜರನ್ನಾಗಿ ನೇಮಿಸುತ್ತೇವೆ. ಇನ್ನೂರು ರೂಪಾಯಿ ಸಂಬಳ. ನಾಳೆ ಬಂದು ನನ್ನನ್ನು ನೋಡು" ಎಂದು ರಾಮಯ್ಯನೊಂದಿಗೆ ಹೇಳಿದ. ಹುಡುಗ ಹರ್ಷಗೊಂಡ.

ಬಂಗಾರಯ್ಯನನ್ನು ಕಳುಹಿಸಿಕೊಡಲು ರಾಮಯ್ಯ ಆತನ ಹಿಂದೆಯೇ ಬರುತ್ತಿದ್ದ. ಅಸ್ಥಿಪಂಜರದಂತಿದ್ದು, ಕಷ್ಟಪಡುತ್ತಿದ್ದ ಗೌರಿಯಕಡೆ ಬೆರಳು ಮಾಡಿ "ಪಾಪ ಈಕೆ ಯಾರು" ಎಂದ ಬಂಗಾರಯ್ಯ. ಆ ಸ್ಥಿತಿಯಲ್ಲಿದ್ದ ಆಕೆಯನ್ನು ತನ್ನ ತಾಯಿ ಎಂದು ಹೇಳಲು ಬಾಯಿ ಬರಲಿಲ್ಲ ರಾಮಯ್ಯನಿಗೆ. ಅಪ್ರಯತ್ನವಾಗಿ ತಡಬಡಿಸದೆ "ನಮ್ಮ ಮನೆ

ಕೆಲಸದವಳು" ಎಂದ. ಇದ್ದರೂ ಇರಬಹುದು ಎಂದು ಅಂದುಕೊಂಡ ಬಂಗಾರಯ್ಯ.

* * *

ಮರುದಿನ ಮತ್ತೆ ಬಂಗಾರಯ್ಯನ ಹತ್ತಿರ ರಾಘವಯ್ಯ ಬಂದ. ಬಂಗಾರಯ್ಯ ತಾನು ಮಾಡಿದ ಕೆಲಸ ಹೇಳಲು, ರಾಘವಯ್ಯ ತುಂಬಾ ಮೆಚ್ಚಿಕೊಂಡ. "ಒಳ್ಳೇ ಕೆಲಸ ಮಾಡಿದಿರಿ. ನಿಮ್ಮ ಜಮೀನುದಾರಿ ನೋಡಿಕೊಳ್ಳಲು ರಾಮಯ್ಯ ಅರ್ಹನಾದವನು. ಪಾಪ, ಅವನ ತಾಯಿ ಗೌರಿಯ ಕಷ್ಟಗಳು ಇಂದಿಗೆ ತೀರಿತಲ್ಲಾ ಎಂದು ನನಗೆ ತುಂಬಾ ಆನಂದವಾಗಿದೆ" ಎಂದ. ಏನೋ ಜ್ಞಾಪಕಕ್ಕೆ ಬಂದವನಂತೆ ಗಬಕ್ಕನೆ ಎದ್ದು ಬಂಗಾರಯ್ಯ "ಯಾರು? ಅವನ ತಾಯಿ ಗೌರಿಯೇ? ಆಕೆ ಎಲ್ಲಿದ್ದಾಳೆ. ಒಂದು ಸಾರಿ ಹೋಗಿ ನೋಡಿಕೊಂಡು ಬಂದರೆ ಚೆನ್ನಾಗಿರುವುದು" ಎಂದ ಆತುರದಿಂದ.

"ಯಾರೇನು? ಸದಾ ಬೆರಣಿ ತಟ್ಟುತ್ತಾ ಮನೆ ಹೊಸಲಿನ ಹತ್ತಿರವೇ ಕುಳಿತಿರುತ್ತಾಳೆ ಆಕೆ. ಆ ಅಸ್ಥಿಪಂಜರ ನಿಮಗೆ ಕಾಣಿಸಲಿಲ್ಲವೆ?" ಎಂದು ಮರುಪ್ರಶ್ನೆ ಹಾಕಿದ ರಾಘವಯ್ಯ.

"ಆಕೆ ಅವನ ತಾಯಿಯೆ?" ಎಂದೆನ್ನುತ್ತಾ ಬಂಗಾರಯ್ಯ ಸೋತುಹೋದವನಂತೆ ಕುರ್ಚಿಯಲ್ಲಿ ಕುಳಿತುಬಿಟ್ಟ. ಆತನ ಮನಸ್ಸು ಸ್ವಲ್ಪ ನೆಮ್ಮದಿಯಾದಮೇಲೆ ರಾಘವಯ್ಯ ನಡೆದ ಸಮಾಚಾರವೆಲ್ಲಾ ತಿಳಿದುಕೊಂಡ.

* * *

ಬಂಗಾರಯ್ಯ ಹೇಳಿದ ಸಮಯಕ್ಕೆ ಸರಿಯಾಗಿ ರಾಮಯ್ಯ ಸೊಗುಸಾಗಿ ಪೋಷಾಕು ಧರಿಸಿಕೊಂಡು ಬಂದು, ವಿಜಿಟಿಂಗ್ ಕಾರ್ಡ್ ಜವಾನನ ಕೈಯಲ್ಲಿ ಕೊಟ್ಟು ಒಳಗೆ ಕಳುಹಿಸಿದ. ಕರೆ ಬರುವುದೆಂದು ಎದುರು ನೋಡುತ್ತಿದ್ದ ರಾಮಯ್ಯನ ಕೈಗೆ ಮರುಕ್ಷಣದಲ್ಲಿಯೇ ಆತನ ಕಾರ್ಡೇ ವಾಪಸು ಬಂತು. ಆತುರದಿಂದ ಅದನ್ನು ತಿರುಗಿಸಿ ನೋಡಲು ಅದರಲ್ಲಿ ಈ ರೀತಿ ಬರೆದಿತ್ತು "ಹೆತ್ತ ತಾಯಿಯನ್ನೇ ಅಲ್ಲವೆಂದ ನೀನು, ಬೇರೆ ಯಾವ ದ್ರೋಹ ಮಾಡಲೂ ಹಿಂದೆಗೆಯಲಾರೆ. ಬಂದ ದಾರಿ ಹಿಡಿ, ನಡೆ"

ರಾಮಯ್ಯ ತಲೆ ತಗ್ಗಿಸಿಕೊಂಡು ಬಂದ ದಾರಿ ಹಿಡಿದ.






ರಾಮರಾವಣರ ಯುದ್ಧ ಮುಗಿಯಿತು. ಲೋಕಕಂಟಕನಾದ ಹತ್ತುಶಿರಗಳ ರಾವಣಾಸುರನೂ, ಆತನ ಪರಿವಾರವೂ ನಾಶವಾದಂತಾಯಿತು. ಹೌದೋ! ಅವತಾರಪುರುಷನಾದ ಶ್ರೀರಾಮನೂ ಆತನ ಪರಿವಾರವೂ ಜಯಘೋಷಣೆಗಳೊಂದಿಗೆ ಸಂತೋಷದಲ್ಲಿ ತಲ್ಲೀನರಾದರು. ಹಾಗಾದರೆ ಶ್ರೀರಾಮನ ಪರಿವಾರ ಯಾರು ಅಂತ ಕೇಳಬಹುದು. ಮತ್ತೆ ಯಾರೂ ಅಲ್ಲ. ಕಪಿವೀರರು! ಈ ಮಾತನ್ನು ನಾವು ಮರೆಯಲೇ ಕೂಡದು.

'ಬಂದ ಕಾರ್ಯ ಮುಗಿದಮೇಲೆ ಲಂಕೆಯಲ್ಲಿ ಇನ್ನೇಕಿರಬೇಕು? ಅಯೋಧ್ಯೆಗೆ ಹೋಗೋಣವೇ?' ಎಂದ ಶ್ರೀರಾಮಚಂದ್ರ. ಕೂಡಲೇ ವಿಭೀಷಣನು ಹೋಗಿ ಪುಷ್ಪಕ ವಿಮಾನ ತಂದ. ಪುಷ್ಪಕವಿಮಾನವೆಂದರೆ ಗೊತ್ತೇ? ಅದೊಂದು ವಿಚಿತ್ರವಾದ ವಿಮಾನ. ಅದರಲ್ಲಿಎಷ್ಟುಜನ ಹತ್ತಿಕುಳಿತರೂ ಇನ್ನೂ ಒಬ್ಬರಿಗೆ ಸಾಕಾಗುವಷ್ಟು ಜಾಗವಿರುತ್ತಿತ್ತಂತೆ.

ರಾಮ, ಸೀತೆ, ಲಕ್ಷ್ಮಣ ಮತ್ತಿತರಪ್ರಮುಖರು ವಿಮಾನ ಹತ್ತಿದರು. ಅವರೊಂದಿಗೆ ಹನುಮಂತನೂ ಹತ್ತಿದ. ಕಪಿಸೇನೆಗೆ ನಾಯಕರಾದ ಅಂಗದ, ಸುಗ್ರೀವಾದಿಗಳು ಕೆಳಗೇ ನಿಂತಿದ್ದರು. ಅವರ ಹತೋಟಿಯಲ್ಲಿ ಕಪಿವೀರರೆಲ್ಲಾ ಬಾಲಸೊಂಟಕ್ಕೆ ಕಟ್ಟಿ, ಕೈ ಹಿಸಿಕಿಕೊಳ್ಳುತ್ತಾ ಸಾಲಾಗಿ ನಿಂತಿದ್ದರು. 'ಹೋಗಿ ಬರುತ್ತೇನೆ' ಎಂಬಂತೆ ಅವರ ಕಡೆ ಶ್ರೀರಾಮನು ಒಂದು ನೋಟಬೀರಿದ. ಹೆಚ್ಚು ಮಾತನಾಡಲಾರದೆ, 'ನಮ್ಮ ಮೇಲೆ ದಯೆ ಇಟ್ಟಿರಬೇಕು' ಎಂದರು ನಾಯಕರು. ಈ ಸಮಯದಲ್ಲಿ ರಾಮನು ಕಪಿವೀರರೆಲ್ಲರ ಕಡೆ ದೃಷ್ಟಿ ಬೀರಿದ. ರಾಮನೊಂದಿಗೆ ಏನೋ ಬಿನ್ನವಿಸಿಕೊಳ್ಳಬೇಕೆಂಬ ಆತುರ ಅವರ ಮುಖಗಳಲ್ಲಿ ಗೋಚರಿಸಿತು. ಕಪಿವೀರರು ಗುಸಗುಸ ಮಾತನಾಡುತ್ತಿದ್ದರು. 'ಹುಷ್' ಎಂದು ಅವರನ್ನು ಗದರಿಸಿದರು ನಾಯಕರು. ಅತಿ ಉತ್ಸಾಹದಿಂದ ಕಪಿವೀರರೆಲ್ಲಾ ಒಂದೇ ಸಾರಿ ಮಾತನಾಡಲು ಆರಂಭಿಸಿದರು. 'ಏನು, ನಮ್ಮ ಸಮ್ಮುಖದಲ್ಲೇ ಗಲಾಟೆಯೇ?' ಎಂಬಂತೆ ನಾಯಕರು ಅವರ ಕಡೆ ತೀವ್ರದೃಷ್ಟಿಯಿಂದ ನೋಡಿದರು.

ಎಂ. ನಾಗೇಶರಾವ್, ಮಾಲೂರು



ಆಗ ವಾಲಯ್ಯ ಎಂಬ ಕಪಿವೀರನು ತಾನು ನಿಂತಿದ್ದ ಸಾಲಿನಿಂದ ಮುಂದೆ ಬಂದು "ಸ್ವಾಮಿ, ಅಭಯ ನೀಡಿದಿರಾದ್ದರಿಂದ ಹೊಟ್ಟೆಯಲ್ಲಿರುವ ಉದ್ದೇಶವನ್ನು ಬಿನ್ನವಿಸಿಕೊಳ್ಳುವೆವು. ರಾಮನ ಸೇವೆಗಾಗಿ ಹುಟ್ಟಿದ ವೀರರು ನಾವು. ಬಂದ ಕೆಲಸವಾಯಿತು. ಈಗ ನಮ್ಮನ್ನು ಹಠಾತ್ತನೆ ಹೀಗೆ ಬಿಟ್ಟು ಬಿಟ್ಟರೆ ಹೋಗುವುದಾದರೂ ಎಲ್ಲಿಗೆ? ನೀವೇ ಹೇಳಿ. ನಮ್ಮ ರಾಮಪ್ರಭುವೇ ಹೀಗೆ ಬಿಟ್ಟು ಬಿಟ್ಟಲ್ಲಿ ನಮ್ಮನ್ನು ವಿಮಾನ ಹತ್ತಿಸುವವರು ಯಾರು? ನಮ್ಮ ಆಶೆಗಳನ್ನು ಈಡೇರಿಸುವವರು ಯಾರು? ನನ್ನ ಮಾತುಗಳಲ್ಲಿ ತಪ್ಪೇನಾದರೂ ಇದ್ದಲ್ಲಿ ಮನ್ನಿಸಿ" ಎಂದ.

"ಅದಲ್ಲ ಸ್ವಾಮಿ. ಎಷ್ಟು ಜನರನ್ನಾದರೂ ಹೊತ್ತುಕೊಂಡು ಹೋಗುವ ಮಹಿಮೆಯುಳ್ಳ ಪುಷ್ಪಕವಿಮಾನವಿರುವಲ್ಲಿ ನಮ್ಮೆಲ್ಲರನ್ನೂ ಅದರಲ್ಲಿ ಹತ್ತಿಸಿಕೊಳ್ಳಲು ಸಂದೇಹವೇಕೆ? ಯಾರದೇನು ಹೋಗುತ್ತೆ" ಎಂದು ಪ್ರಶ್ನೆ ಮಾಡಿದ ಮತ್ತೊಬ್ಬ.

ಇವರು ಹೀಗೆ ಸಿಕ್ಕಾಬಟ್ಟೆ ಮಾತನಾಡುವುದನ್ನು ಕಂಡು ಲಕ್ಷ್ಮಣನಿಗೆ ಬೇಸರವಾಯಿತು. "ನೋಡಿದೆಯೇನಣ್ಣಾ. ಈಗಲೇ ಇವರಿವರಲ್ಲಿ ಒಗ್ಗೊಟ್ಟಿಲ್ಲ. ಈ ಕಪಿಗಳನ್ನು ಸಂಗಡ ಕರೆದುಕೊಂಡು ಹೋದರೆ ಎಲ್ಲಾ ನಗುತ್ತಾರೆ" ಎಂದ.

ತಮ್ಮನನ್ನು ಮೂದಲಿಸಿ, ಶ್ರೀರಾಮನು ಇಷ್ಟುಮಾತ್ರ ತಿಳಿಯಲಾರನೇ ಆ ಸುಗುಣಾಭಿರಾಮ. "ಅಂಗದಾ, ಸುಗ್ರೀವಾ, ಕಪಿವೀರರನ್ನು ನೀವು ಭಯಪಡಿಸಬೇಡಿ. ಅವರ ಮನಸ್ಸಿನಲ್ಲಿರುವ ಕೋರಿಕೆಗಳನ್ನು ನಿರ್ಭಯವಾಗಿ ಹೇಳಲಿ, ಬಿಡಿ. ಅವರೇನೂ ಸಾಮಾನ್ಯರಲ್ಲ. ನಮಗೆ ಯುದ್ಧದಲ್ಲಿ ಜಯವನ್ನುಂಟುಮಾಡಿದ ವೀರಪುಂಗವರು. ಅಷ್ಟೇ ಅಲ್ಲ. ಅಧಿಕಾರ ಚಲಾಯಿಸುವ ಕಾಲ ದಾಟಿ ಹೋಯಿತು. ಅನುರಾಗ ಸೂಸಬೇಕಾದ ಸಮಯವಿದು...." ಎಂದ ಶ್ರೀರಾಮ. ಹೀಗೆ ಉತ್ತೇಜನ ಕೊಡುವ ಶ್ರೀರಾಮನ ಮಾತುಗಳನ್ನು ಕೇಳಿ ಸಂತೋಷ ತಡೆಯಲಾರದೆ, ಕಪಿವೀರರು ಬಾಲಬಿಚ್ಚಿ ಮತ್ತೊಂದು ಸಾರಿ 'ಓ' ಎಂದು ಕಿರುಚಿದರು.

"ವಾಲಯ್ಯಾ ನೀನೇನೂ ಆತುರಪಡಬೇಡ. ನಮ್ಮಲ್ಲಿ ಯಾರೊಬ್ಬರೂ ಇಲ್ಲಿ ಉಳಿಯಬೇಕಾಗಿಲ್ಲ. ಎಲ್ಲರೂ ಕಲೆತು ಅಯೋಧ್ಯೆಗೆ ಹೋಗೋಣ. ದಿವ್ಯವಾದ ಪುಷ್ಪಕವಿಮಾನವಿರುವಾಗ ನಮಗೇನು ಕೊರತೆ. ಈ ವಿಷಯ ಮೊದಲೇ ನಿಮಗೆ ಹೇಳಬೇಕಿತ್ತು. ಮರೆತು ಬಿಟ್ಟೆ....." ಎಂದು ತನ್ನ ಮಂದಮತಿಗೆ ಸಣ್ಣ ಮುಖ ಮಾಡಿಕೊಂಡ.



"ಹೌದೌದು... ಎಂತಹ ಪೊರಪಾಟಲು ನಡೆಯಿತು. ನಮ್ಮ ಕಪಿವೀರರ ಕೋರಿಕೆಗಳೇನೇನಿದೆಯೋ ಈಗಲಾದರೂ ತಿಳಿದುಕೊಳ್ಳಿ" ಎಂದು ಸಲಹಾಪೂರ್ವಕವಾಗಿ ಎಚ್ಚರಿಸಿದಳು ಜಾನಕಿ.

ಅಷ್ಟರಲ್ಲಿ ತಿಂಡಿಪೋತ ತಿಮ್ಮಯ್ಯ ಹೆದರುತ್ತಾ ಮುಂದೆ ಬಂದು "ರಾಮದೇವರೇ, ಯಾರೇನು ಬೇಡಿದರೂ ಇಲ್ಲವೆನ್ನದೆ ಅನುಗ್ರಹಿಸುವನೆಂದು ಖ್ಯಾತಿ ಪಡೆದಿರುವಾತ ನೀನು. ಗೆಡ್ಡೆಗೆಣಸು, ಸೊಪ್ಪುಸದೆ ಅಗಿದಗಿದು ಬೇಜಾರಾಗಿದೆ. ನಿಮ್ಮಂತಹ ರಾಜಾಧಿರಾಜರು ರುಚಿಕರವಾದ ಲಾಡು ಫೇಣಿಗಳನ್ನು ಭುಜಿಸುವಿರಿ. ನಾವು ಮಾತ್ರ ಅವುಗಳ ಸವಿ ಸ್ವಲ್ಪ ನೋಡಕೂಡದೇ" ಎಂದು ತನ್ನ ಅಪೇಕ್ಷೆ ತಿಳಿಸಿದ.

ಅಮಾಯಕವಾದ ಈ ಕೋರಿಕೆ ಕೇಳಿ ಸೀತಾರಾಮರು ನಸುನಕ್ಕರು. 'ಮೊದಲೇ ಕೋತಿ. ಅದರಲ್ಲೂ ಯುದ್ಧದಲ್ಲಿ ಜಯ ಗಳಿಸಿದ ಉತ್ಸಾಹದ ಸಮಯ. ಅದೆಲ್ಲಕ್ಕಿಂತಲೂ ಹೆಚ್ಚಾಗಿ ಶ್ರೀರಾಮಚಂದ್ರನು ಬೇಕಾದುದನ್ನೆಲ್ಲಾ ಕೇಳಿ ಎಂದು ಬೇರೆ ಹೇಳಿದ್ದಾನೆ. ಮೈಮೇಲೆ ಎಚ್ಚರಿಕೆ ಇಲ್ಲದೆ ಇವರು ಇನ್ನೂ ಹುಚ್ಚುಚ್ಚಾರೆ ಕೋರಿಕೆಗಳೇನನ್ನು ಕೋರುವರೋ' ಎಂದು ಊಹಿಸಿ ಹನುಮಂತನು ಒಂದು ಸಾರಿ ಹೂಂಕರಿಸಿದನು. ಕಪಿವೀರರು ತಲೆ ತಗ್ಗಿಸಿದರು.

ತಿಮ್ಮಯ್ಯನ ಕೋರಿಕೆ ಕೇಳಿದಕೂಡಲೇ ಶ್ರೀರಾಮನು "ಹಾಗೇ ಆಗಲಪ್ಪಾ. ಲಾಡು ಫೇಣಿ ಎಲ್ಲಾ ತಪ್ಪದೆ ತಿನ್ನುವಿರಂತೆ. ಅಯೋಧ್ಯೆ ಸೇರಿಕೊಂಡಕೂಡಲೇ ಎಲ್ಲಾ ಮಾಡಿಕೊಳ್ಳಬಹುದು. ತಡವೇಕೆ, ಬನ್ನಿ" ಎಂದ.



ಗಿರಗಿರ ಬಾಲ ಆಡಿಸುತ್ತಾ ಕಪಿವೀರರೆಲ್ಲಾ ವಿಮಾನ ಹತ್ತಿದರು. ಝುಂಕಾರಮಾಡುತ್ತಾ ವಿಮಾನ ಗಗನ ಮಾರ್ಗವಾಗಿ ಹಾರಿ, ಸ್ವಲ್ಪ ಸಮಯಕ್ಕೆಲ್ಲಾ ಅಯೋಧ್ಯಾಪುರಿಯನ್ನು ಸೇರಿತು. ಅಯೋಧ್ಯೆಯಲ್ಲಿ ಇಳಿದತಕ್ಷಣ ಮೊದಲು ಸೀತಾರಾಮರು ಕಪಿವೀರರಿಗೆ ಔತಣದ ಏರ್ಪಾಟನ್ನು ಮಾಡಿದರು. ಹನುಮಂತ ಉಸ್ತುವಾರಿ ವಹಿಸಿಕೊಂಡ.

ಒಂದು ಗಂಟೆಯಲ್ಲಿ ವಸ್ತುಸಾಮಗ್ರಿಗಳೆಲ್ಲಾ ಜೊತೆಗೂಡಿದವು. ಮತ್ತೊಂದು ಗಂಟೆಗೆ ಪಂಚಭಕ್ಷ ಪರಮಾನ್ನಗಳೊಂದಿಗೆ ಎಲ್ಲರಿಗೂ ಅಡಿಗೆ ಸಿದ್ಧವಾಯಿತು "ಎಲ್ಲರೂ ಬಂದು ಸಾಲಾಗಿ ಕುಳಿತುಕೊಳ್ಳಿ, ಬಡಿಸುತ್ತಾರೆ" ಎಂದು ಹನುಮಂತ ಹೇಳಿದ.

ಹನುಮಂತನ ಮಾತು ಕೇಳಿ ಎಲ್ಲರೂ ಪಂಕ್ತಿಯಲ್ಲಿ ಕುಳಿತರು. ಒಂದು ಕ್ಷಣವಾದರೂ ಆಯಿತೋ ಇಲ್ಲವೋ, ಎಲ್ಲಿಂದಲೋ ಒಂದು ಸೊಂಡೆಕಾಯಿ ಬಂದು ಕಪಿವೀರನೊಬ್ಬನ ಮಡಿಲಲ್ಲಿ ಬಿತ್ತು. ವೀರನು ಆ ಕಾಯಿಯನ್ನು ತದೇಕ ದೃಷ್ಟಿಯಿಂದ ನೋಡಿ, ಒಳಗೇನಿರುವುದೋ ಎಂದು ಆತುರದಿಂದ ಎರಡು ಕೈಗಳಿಂದಲೂ ಹಿಚುಕಿದ. ಪುಸಕ್ಕನೆ ಒಂದು ಬೀಜ ಕಾಯಿಯಿಂದ ಹೊರಕ್ಕೆ ಹಾರಿತು.

"ಎಲ ಎಲಾ, ಗೇಣುದ್ದ ಇಲ್ಲ, ನನಗಿಂತಲೂ ಎತ್ತರ ಹಾರೋಣವೆಂದೋ ನಿನ್ನ ಉದ್ದೇಶ" ಎಂದು ಆ ವೀರನು ಆ ಬೀಜದೊಂದಿಗೆ ಒಂದು ನೆಗೆತ ನೆಗೆದ. 'ನಮ್ಮ ಸೋದರ ಏಕೆ ಹಾರಿದನೋ, ಏನು ಪ್ರಮಾದ ಸಂಭವಿಸಿತೋ, ನಾವು ಸಹಾಯ ಮಾಡದಿದ್ದರೆ ಹೇಗೆ?' ಎಂದುಕೊಂಡು ಪಕ್ಕದಲ್ಲಿದ್ದ ಮತ್ತೊಬ್ಬ ವೀರನು ಹಾರಿದ. ಈ ಇಬ್ಬರು ನೆಗೆದುದನ್ನು ಕಂಡು, ಕಾರಣ ತಿಳಿದುಕೊಳ್ಳದೆಯೇ ಇನ್ನೊಬ್ಬನೂ, ಮತ್ತೊಬ್ಬನೂ ಬಂದು ಅವರೊಂದಿಗೆ ಎಗರಿದರು. ಅಷ್ಟರಲ್ಲಿ ಎಲೆಗಳೆಲ್ಲಾ ಚದುರಿಹೋಗಿ ಎಲ್ಲರೂ ಒಂದೆಡೆ ಸೇರಿ ಜಿಗಿದಾಡ ತೊಡಗಿದರು.

ಇದನ್ನು ಕಂಡು ಹನುಮಂತ "ಏನ್ರೋ, ಏನಿದು ಗೊಂದಲ. ಆಗಲೇ ನಿಮ್ಮ ಬುದ್ಧಿ ಮಣ್ಣು ಮುಕ್ಕಿತೆ? ನಮ್ಮ ಚೇಷ್ಟೆಗಳನ್ನು ನೋಡಿಯೇ ಎಲ್ಲರೂ ನಮ್ಮನ್ನು ಕಪಿಗಳತಂಡ

ಎಂದು ಗೇಲಿ ಮಾಡುತ್ತಾರೆ. ಊಟದ ಸಮಯದಲ್ಲೇ ಇಷ್ಟೊಂದು ಗಲಭೆ ಮಾಡಿರುವುದನ್ನು ನೋಡಿ ಆ ಶ್ರೀರಾಮಚಂದ್ರನು ಮಾತ್ರ ಎಷ್ಟೊಂತ ಸಹಿಸುತ್ತಾನೆ...." ಎಂದು ಮೂದಲಿಸಿದನು.

ಇಷ್ಟರಲ್ಲಿ ಎಲೆ ಹಾಕಿದರು. ಕೂಡಲೇ ಲಾಡೂ ಬುಟ್ಟಿಗಳನ್ನು ಕೈಯಲ್ಲಿ ಹಿಡಿದುಕೊಂಡು ಸೀತಾರಾಮರು ತಾವೇ ಬಡಿಸಲು ಬಂದರು. "ಹನುಮಂತಾ, ನಮ್ಮ ವೀರರ ಮೇಲೇಕೆ ಬೇಸರಪಟ್ಟುಕೊಳ್ಳುವೆ? ನೋಡು, ಪಾಪ, ಎಷ್ಟು ಬುದ್ಧಿಯಿಂದ ಕುಳಿತುಕೊಂಡಿದ್ದಾರೋ. ಹೆಚ್ಚು ಗಲಭೆ ಮಾಡಿದ ಅಂತ ಹೇಳಿದೆಯಲ್ಲಾ ಆ ವೀರನಾರು? ಅತನಿಗೆ ಎರಡು ಲಾಡು. ಅದೇ ಅತನಿಗೆ ಶಿಕ್ಷೆ." ಎಂದ ಕೂಡಲೇ ಎಲ್ಲಿನವರು ಅಲ್ಲೇ ಸರಿಪಡಿಸಿಕೊಂಡು ಕುಳಿತುಕೊಂಡರು. 'ಇವರಿಗೆ ಬುದ್ಧಿ ಬಂತು. ಪರವಾಯಿಲ್ಲ' ಎಂದು ಹನುಮಂತ ಧೈರ್ಯಗೊಂಡ.

ಜಾನಕಿ, ರಾಮರು ಬಡಿಸುತ್ತಿರುವಾಗ ಇದ್ದಕ್ಕಿದ್ದಂತೆಯೇ ಒಂದು ಕಪಿ ಶ್ರೀರಾಮನ ಭುಜದ ಮೇಲೆ ಹತ್ತಿ ಕುಳಿತುಕೊಂಡಿತು. ಮತ್ತೊಂದು, ಬುಟ್ಟಿಯಲ್ಲಿದ್ದ ಲಾಡುಗಳನ್ನು ಬಲವಂತದಿಂದ ಕಿತ್ತುಕೊಂಡಿತು. ಮಗದೊಬ್ಬ ಕಪಿವೀರನು ಸುಮ್ಮನಿರಲಾರದೆ,




ಜಾನಕಿಯ ಕೊರಳಲ್ಲಿದ್ದ ಹಾರವನ್ನು ತೆಗೆದು ಪರೀಕ್ಷೆ ಮಾಡಲು ಹೋದ, ಏನೋ ತುಂಬಾ ತಿಳಿದವನಂತೆ.

ಇಷ್ಟಾದರೂ ಆ ದಂಪತಿಗಳು ಆನಂದದಿಂದಲೇ ಇದ್ದರು. ನಿಜವಾಗಿ ಕಪಿವೀರರ ಚೇಷ್ಟೆಗಳನ್ನು ನೋಡಿದಷ್ಟೂ ಅವರಿಗೆ ಸಂತೋಷ ಹೆಚ್ಚಾಗುತಿತ್ತು. ಆದರೆ ಅವರು ಪಡುವ ಯಾತನೆಯನ್ನು ನೋಡಲಾರದೆ ಹನುಮಂತನೂ, ಲಕ್ಷ್ಮಣನೂ ಕಪಿವೀರರನ್ನು ಕ್ರೂರದೃಷ್ಟಿಯಿಂದ ನೋಡುತ್ತಿರಲು, ಶ್ರೀರಾಮನು ಮಂದಹಾಸದಿಂದ "ಹನುಮಂತ, ಲಕ್ಷ್ಮಣಾ, ನಮ್ಮ ಮಕ್ಕಳಗಲಾಟೆ ನಮಗೆ ಮುದ್ದಾಗಿರುವುದಿಲ್ಲವೇ? ಆದರೂ ಅವರು ಮಾಡುತ್ತಿರುವುದು ಗಲಾಟೆಯಲ್ಲ.

ಅದು ನಿಷ್ಕಪಟವಾದ ಆನಂದ" ಎಂದ. ಔತಣ ಮುಗಿಯಿತು. ಪ್ರತಿಯೊಬ್ಬ ಕಪಿವೀರ ನನ್ನೂ ಸನಿಯಕ್ಕೆ ಕರೆದು, ಶ್ರೀರಾಮಚಂದ್ರ ಮೂರ್ತಿ ಬೆನ್ನು ತಟ್ಟಿ ಮೈದಡವಲು, ಅವರಿಗೆ ಯುದ್ಧದ ಬಳಲಿಕೆ ಮಾಯವಾಯಿತು.

ತರುವಾಯ ಶ್ರೀರಾಮನ ಪಟ್ಟಾಭಿಷೇಕಕ್ಕೆ ಅತಿ ವೈಭವವಾದ ಏರ್ಪಾಟುಗಳು ನಡೆದವು. ಆ ಸಮಯದಲ್ಲಿ ಶ್ರೀರಾಮಚಂದ್ರನು ಪ್ರತ್ಯೇಕವಾಗಿ ಕಪಿ ಸೈನ್ಯವನ್ನೂ, ಅವರ ತಿಳುವಳಿಕೆಯನ್ನೂ ಕುರಿತು ಪ್ರಶಂಸೆ ಮಾಡಿದ. ಅಷ್ಟು ಮಾತ್ರವೇ ಅಲ್ಲದೆ ತುಂಬಿದ ಸಭೆಯಲ್ಲಿ "ಓ ಮಹಾವೀರರೇ, ಭೂಲೋಕದಲ್ಲಿ ರಾಮನ ಕಥೆಯೊಂದಿಗೆ ರಾಮನಿಗೆ ಸೇವೆಗೆ ಅಂಕಿತವಾದ ಕಪಿವೀರರ ಗುಣಗಾನವೂ ಸಹ ನಡೆಯುತ್ತಲಿರುವುದು. ಕಪಿವೀರನು ಕಣ್ಣಿಗೆ ಬಿದ್ದರೆ ಸಾಕು, ಮಾನವನಿಗೆ ರಾಮಾಯಣ ಜ್ಞಾಪಕಕ್ಕೆ ಬರುವುದು. ಇವೆರಡಕ್ಕೂ ಅಷ್ಟೊಂದು ಹತ್ತಿರದ ಸಂಬಂಧವಿದೆ. ನಿಮ್ಮ ಸಂತೋಷವೇ ನಮ್ಮ ಸಂತೋಷವೆಂದು ಎಣಿಸುವುದರಿಂದ, ಮಾನವರು ನಿಮ್ಮನ್ನು ಗೌರವಿಸಿದರೆ ನನ್ನನ್ನು ಪೂಜಿಸಿದಂತೆ ತಿಳಿಯುವೆನು. ಇಲ್ಲಿಂದ ಇನ್ನುಮುಂದೆ ನೀವು ಈ ದೇಶದಲ್ಲಿರುವ ಪುಣ್ಯಕ್ಷೇತ್ರಗಳನ್ನು ಸೇರಿ ವಾಸಮಾಡಿ. ಅಲ್ಲಿಗೆ ಬರುವ ಭಕ್ತಾದಿಗಳು ನಿಮ್ಮನ್ನು ಕಂಡಕೂಡಲೇ ರಾಮಾಯಣ ನೆನೆದು ಧನ್ಯರಾಗುವರು. ನೀವು ಮಾಡಿದ ಸಹಾಯಕ್ಕೆ ಇದೇ ನಾನು ಕೊಡುವ ಕಾಣಿಕೆ" ಎಂದು ವಿನಯ ಪೂರ್ವಕವಾಗಿ ನುಡಿದ ರಾಮ.

ಶ್ರೀರಾಮಚಂದ್ರಮೂರ್ತಿ ಹೀಗೆ ಹೇಳುತ್ತಿರಲು ಜಯದುಂದುಭಿಗಳು ಮೊಳಗಿದವು. ಕಪಿವೀರರಮೇಲೆ ಪುಷ್ಪವೃಷ್ಟಿ ಆಯಿತು. ಕಪಿವೀರರು ಬಾಲ ಆಡಿಸುತ್ತಾ ಸೀತಾರಾಮರಿಗೂ, ಹನುಮಂತನಿಗೂ ನಮಸ್ಕಾರ ಮಾಡಿ ಅಪ್ಪಣೆ ಪಡೆದು, ದಿವ್ಯಕ್ಷೇತ್ರಗಳಿಗೆ ಹೋಗಿ ಸೇರಿಕೊಂಡರು.






ಒಬ್ಬ ಗುರುಗಳು ಏಲೇಶ್ವರವೆಂಬ ಗ್ರಾಮದಲ್ಲಿ ಗುರುಕುಲವನ್ನು ಸ್ಥಾಪಿಸಿ, ವಿದ್ಯೆ ಹೇಳಿಕೊಡುತ್ತಿದ್ದರು. ಗುರುಗಳು ಮಹಾಪಂಡಿತರೆಂದೂ, ಶಾಸ್ತ್ರಪಾರಂಗತರೆಂದೂ ದೇಶದಲ್ಲೆಲ್ಲಾ ಕೀರ್ತಿ ಹರಡಿತು. ಈ ಖ್ಯಾತಿಯನ್ನು ಕೇಳಿ ನಾಲ್ಕು ಮೂಲೆಗಳಿಂದಲೂ ಅನೇಕಮಂದಿ ವಿದ್ಯಾರ್ಥಿಗಳು ಓದಿ ವಿದ್ಯಾವಂತರಾಗಲು ಆತನ ಹತ್ತಿರಕ್ಕೆ ಬರುತ್ತಿದ್ದರು.

ಹೀಗೇ ಒಂದು ಸಾರಿ ದೂರಪ್ರಾಂತದಿಂದ ಒಬ್ಬ ಹುಡುಗ ಉಪಾಧ್ಯಾಯರ ಹತ್ತಿರ ಬಂದ. ಆ ಹುಡುಗನನ್ನು ಕಂಡಕೂಡಲೇ ಗುರುಗಳಿಗೆ ಮಮತೆ ಉಂಟಾಯಿತು. ಆ ಹುಡಗನ ರೂಪು, ರೇಖೆ, ವಿನಯ ವಿಧೇಯತೆ, ಬುದ್ಧಿಕುಶಲತೆಗಳು ಆತನನ್ನು ಬಹುಬೇಗ ಆಕರ್ಷಿಸಿತು. ಅದಕ್ಕೆಂತಲೇ ಇತರ ಶಿಷ್ಯರೆಲ್ಲರಿಗಿಂತಲೂ ಪ್ರತ್ಯೇಕ ಮುತುವರ್ಜಿ ವಹಿಸಿ ಈ ಹುಡುಗನನ್ನು ನೋಡಿಕೊಳ್ಳುತ್ತಿದ್ದರು.

ಅಷ್ಟೇ ಅಲ್ಲ. ಅವನಿಗೆ ತಮ್ಮ ಮನೆಯಲ್ಲೇ ಊಟಕ್ಕೂ ಏರ್ಪಾಟು ಮಾಡಿ, ತನಗೆ ಬರುವ ಸಮಸ್ತ ವಿದ್ಯೆಗಳನ್ನು ಅರೆದು ಕುಡಿಸಿದ. ಹುಡುಗನೂ ಸಹ ಗುರುಗಳ ಶುಶ್ರೂಷೆ ಮಾಡುತ್ತಾ ಶ್ರದ್ಧಾಭಕ್ತಿಗಳಿಂದ ಓದಿಕೊಂಡು, ಬೇಗ ಬೇಗ ವಿದ್ಯೆಗಳೆಲ್ಲವನ್ನೂ ಕಲಿತುಕೊಂಡ. ಗುರುಗಳಿಗೆ ಅವನ ಮೇಲೆ ತುಂಬಾ ಅಭಿಮಾನ ಕುದಿರಿತು.

ಇಷ್ಟರಲ್ಲಿ ಮದುವೆಯ ವಯಸ್ಸಿಗೆ ಬಂದ ತಮ್ಮ ಮಗಳನ್ನು ಯಾರಿಗಿತ್ತು ವಿವಾಹ ಮಾಡುವುದು? ಎಂಬ ಪ್ರಸ್ತಾಪ ಗುರುಗಳಿಗೆ ಬಂತು. ಎಷ್ಟೋ ಸಂಬಂಧಗಳನ್ನು ನೋಡಿದರು. ಒಂದೂ ಸರಿಬೀಳಲಿಲ್ಲ. ಯಾವುದೋ ಒಂದು ಒಪ್ಪಿಗೆಯಾದರೂ, ವರದಕ್ಷಿಣೆ, ಕಾಣಿಕೆಗಳ ವಿಷಯದಲ್ಲಿ ಹೊಂದಾಣಿಕೆಯಾಗುತ್ತಿರಲಿಲ್ಲ.

ಕೊನೆಗೆ ಮಿಂಚಿನಂತೆ ಒಂದು ಆಲೋಚನೆ ಹೊಳೆಯಿತು ಗುರುಗಳಿಗೆ. ಬುದ್ಧಿವಂತನಾದ ಹುಡುಗ ಹತ್ತಿರವಿರುವಾಗ ಶ್ರಮ

ಆರ್. ಬಸವಲಿಂಗಯ್ಯ, ಬಳ್ಳಾರಿ



ವಹಿಸಿ ಊರೆಲ್ಲಾ ಹುಡುಕುವುದಾದರೂ ಏಕೆ? ಬಹುಕಾಲದಿಂದ ತನ್ನ ಹತ್ತಿರ ಶಿಷ್ಯ ವೃತ್ತಿ ಮಾಡುತ್ತಿರುವ ಈ ಹುಡುಗ ಸದ್ಗುಣ ಸಂಪನ್ನನು. ನಂಬಿಕೆಯುಳ್ಳವನು. ನಿಜ ವಾಗಿ ನೋಡಿದರೆ ಇಂತಹ ಹುಡುಗ ಸಿಗು ವುದೇ ಅಪರೂಪ. ಅದೃಷ್ಟವಶಾತ್ ನನ್ನ ಶಿಷ್ಯನಾಗುವುದು ಸಂಭವಿಸಿದೆ" ಎಂದು ತಲೆ ಆಡಿಸಿದ. ಮರು ಆಲೋಚನೆ ಇಲ್ಲದೆ ಒಂದು ಶುಭಮುಹೂರ್ತ ನೋಡಿ, ಆ ಹುಡುಗನಿಗೆ ತನ್ನ ಮಗಳನ್ನು ಕೊಟ್ಟು ವಿಜೃಂಭಣೆಯಿಂದ ವಿವಾಹ ಮಾಡಿದ.

ಅಪೂರ್ವವಾದಂಥಹ ಈ ವಿವಾಹಕ್ಕೆ ಎಲ್ಲರೂ ಆಶ್ಚರ್ಯ ಹೊಂದಿದರು. ಗುರು ಗಳಿಗೆ ಶಿಷ್ಯನಮೇಲಿರುವ ಅನುರಾಗಕ್ಕೂ, ಶಿಷ್ಯನಿಗೆ ಗುರುಗಳಲ್ಲಿರುವ ಭಯಭಕ್ತಿಗಳಿಗೂ ಜನ ಪ್ರಶಂಸಿಸಿದರು. ಆ ಹುಡುಗ ತನ್ನನ್ನು ವಿಚಾರಿಸಿದ ಶಿಷ್ಯನಾದುದಕ್ಕೂ, ಅದಕ್ಕಿಂ ತಲೂ ಅಳಿಯನಾದುದಕ್ಕೆ ಗುರು ಸಂತೋಷ ದಿಂದ ಉಬ್ಬಿಹೋದರು. ನೂತನ ದಂಪತಿ ಗಳು ಚಕ್ಕವಕ್ಕಿಗಳಂತೆ ಹಾಯಾಗಿ ಸಂಸಾರ ನಡೆಸುತ್ತಿರುವುದು ಗುರುಗಳ ಕಣ್ಣಿಗೆ ಹಬ್ಬ ವನ್ನುಂಟುಮಾಡುತಿತ್ತು.

ಹೀಗಿರಲು ಮಗಳಿಗೆ ಒಡವೆ ಮಾಡಿಸುವ ಉದ್ದೇಶದಿಂದ ಅಕ್ಕಸಾಲಿ ಬ್ರಹ್ಮಪ್ಪನನ್ನು ಮನೆಗೆ ಬರಮಾಡಿಕೊಂಡರು ಗುರುಗುಳು. ಮನೆಯಲ್ಲಿ ತಮ್ಮೆದುರಾಗಿ ಕುಳ್ಳಿರಿಸಿಕೊಂಡು ಒಡವೆ ಮಾಡಿಸಿದರೆ ಮೋಸ ಮಾಡಲು ಸಾಧ್ಯವಿಲ್ಲವೆಂದು ಅವರ ಊಹೆ. ಬ್ರಹ್ಮಪ್ಪ ಕೆಲಸ ಪ್ರಾರಂಭಿಸಿದ ಅಳಿಯ ಮತ್ತು ಮಾವ ಸರದಿಪ್ರಕಾರ ಕಾವಲು ಕಾಯುತ್ತಿದ್ದರು. ಕೆಲಸ ನಡೆಯುತಿತ್ತು.

ಒಂದು ದಿನ ಗುರುಗಳು ಜಪ ಮಾಡಿ ಕೊಳ್ಳುವ ನಿಷ್ಠೆಯಲ್ಲಿದ್ದಾರೆ. ಬ್ರಹ್ಮಪ್ಪನ ಎದುರಾಗಿ ಕಾವಲು ಕಾಯುತ್ತಿದ್ದ ಅಳಿಯ ಯಾವುದೋ ಕೆಲಸದಮೇಲೆ ಒಂದೇ ಒಂದು ನಿಮಿಷ ಕೊಟಡಿಯೊಳಕ್ಕೆ ಹೋದ. ಆಗ ಬ್ರಹ್ಮಪ್ಪ ಜೋರಾಗಿ ಒಂದು ಸುತ್ತಿಗೆ ಏಟು ಹಾಕಿದ. ಆ ಏಟಿನ ಸದ್ದು ಕಿವಿಗೆ ಬಿದ್ದ ಕೂಡಲೇ ಅಳಿಯ ಓಡೋಡಿ ಬಂದು "ಬ್ರಹ್ಮಪ್ಪ, ಕ್ಷಣದಲ್ಲಿ ಕಣ್ಣುಮರೆಸಿ ಮಾಯ



ಮಾಡಿದೆಯಲ್ಲಾ" ಎಂದ. ಬ್ರಹ್ಮಪ್ಪನ ಮುಖ ಬಿಳುಪೇರಿತು. ನಿಧಾನವಾಗಿ "ಅಲ್ಲ, ಕಂಬಿ ಎಳೆಯುತ್ತಿದ್ದೇನೆ" ಎಂದು ಹೇಳಿದ.

"ಯಾಕಪ್ಪಾ, ಹಾಗೆ ಬಿಳಿಚಿಕೊಳ್ಳುವೆ. ಅಸಲು ಬಂಗಾರದ ಏಟಿಗೂ ಮಿಶ್ರವಾದ ಬಂಗಾರಕ್ಕೂ ಅಷ್ಟು ಮಾತ್ರ ಭೇದ ತಿಳಿಯ ಲಾರೆನೆಂದುಕೊಂಡೆಯಾ? ನನ್ನ ಹತ್ತಿರ ನಡೆಯುವುದಿಲ್ಲ ಈ ಆಟಗಳೆಲ್ಲ" ಎಂದು ಗದರಿಸಿದ.

ಈ ಗಲಾಟೆ ನಡೆಯುತ್ತಿರುವಾಗ, ಜಪ ಮಾಡುತ್ತಿದ್ದ ಗುರುಗಳು ಎದ್ದು ಬಂದರು. "ಏನಯ್ಯಾ ಬ್ರಹ್ಮಪ್ಪ, ನಂಬಿದ್ದಕ್ಕೆ ಇದೇಯೋ ಮಾಡುವುದು" ಎಂದರು.

ಅದಕ್ಕೆ ಬ್ರಹ್ಮಪ್ಪ ಸಂಬಾಳಿಸಿಕೊಂಡು "ಬಾಬೂ, ನಾನೊಂದು ಮಾತು ಹೇಳುತ್ತೇನೆ. ಕುಪಿತರಾಗಬೇಡಿ. ಅಳಿಯಂದಿರ ತಿಳುವಳಿಕೆ ಅಸಾಮಾನ್ಯವಾದುದು. ಅಂತಹವರು ನಿಮಗೆ ಸಿಕ್ಕಿದುದು ತುಂಬಾ ಅದೃಷ್ಟ. ಆದರೆ...." ಎಂದು ಸುಮ್ಮನಿದ್ದ. "ಹೇಳಯ್ಯ ಬ್ರಹ್ಮಪ್ಪ. ಸಂದೇಹವೇಕೆ?" ಎಂದು ಗುರುಗಳು ಅವಸರ ಪಡಿಸಿದರು.

"ಮತ್ತೇನಿಲ್ಲ. ಸುಳ್ಳು ಏಕೆ ಆಡಬೇಕು. ಹೊಟ್ಟೇಪಾಡಿಗೆ ನಾನು ನಿಮ್ಮ ಬಂಗಾರ ಬೆರಕೆ ಮಾಡಿದ ವಿಷಯ ವಾಸ್ತವ. ಆದರೆ ಧ್ವನಿ ಯಿಂದ ಅಸಲು ಬಂಗಾರವೋ, ಮಿಶ್ರ ಬಂ ಗಾರವೋ ತಿಳಿಯಲು ನನ್ನ ಜನಕ್ಕೆ ಮಾತ್ರ ಗೊತ್ತು. ಮತ್ತೆ ಯಾರಿಗೂ ಸಾಧ್ಯವಿಲ್ಲ. ನಾನು ಮಾಡಿದ ಕೆಲಸ ಅಳಿಯಂದಿರು ಹೇಗೆ ಕಂಡು ಹಿಡಿದರೋ, ಇಷ್ಟೊಂದು ಗ್ರಹಣ ಶಕ್ತಿ ಆತನಿಗೆ ಹೇಗೆ ಲಭಿಸಿತೋ ನನಗೆ ಆಶ್ಚರ್ಯವಾಗುತ್ತಿದೆ" ಎಂದ.

ಗುರುಗಳು ಅಳಿಯನನ್ನು ಒತ್ತಿ ಒತ್ತಿ ಕೇಳಲು ಆತನು ಬ್ರಾಹ್ಮಣರ ಹುಡುಗನೆಂದು ಸುಳ್ಳು ಹೇಳಿ ಶಿಷ್ಯನಾಗಿ ಪ್ರವೇಶ ಮಾಡಿದಂ ತೆಯೂ, ನಂಬಿಕೆಯಿಂದ ಶಿಷ್ಯ ವೃತ್ತಿ ಮಾಡಿ ವಿದ್ಯೆ ಕಲಿತಂತೆಯೂ ತಿಳಿದು ಬಂತು. ತಕ್ಷಣವೇ ಗುರುಗಳು ಅಳಿಯನನ್ನೂ ಮಗ ಳನ್ನೂ ಮನೆಯಿಂದ ಹೊರಗೆ ಕಳುಹಿಸಿ, ಊರಾಚೆ ಒಂದು ಕುಟೀರದಲ್ಲಿ ವಾಸಮಾಡು ವಂತೆ ಏರ್ಪಾಟು ಮಾಡಿದರು.




## ಲಂಚಗೂಳಿ ಅಧಿಕಾರಿ

**ಪೂ**ರ್ವಕಾಲದಲ್ಲಿ ಒಬ್ಬ ಉದ್ಯೋಗಿ ಲಂಚ ಪಡೆದು ಯಥೇಷ್ಟವಾಗಿ ಹಣ ಮಾಡಿಕೊಂಡ. ವರಮಾನ ಹೆಚ್ಚಾದ ಕೂಡಲೇ ಅಡಿಗೆ ಮಾಡಲು ಒಬ್ಬ ಬ್ರಾಹ್ಮಣನನ್ನು ಇಟ್ಟುಕೊಂಡು "ನಾಳೆಯಿಂದ ಊಟಕ್ಕೆ ಆರುವಿಧವಾದ ಪದಾರ್ಥಗಳನ್ನು ತಯಾರಿಸು" ಎಂದುಹೇಳಿದ. ಅದೇರೀತಿ ಮಾಡುತ್ತಾ ಬಂದ.

ಕೆಲವು ದಿನಗಳಿಗೆಲ್ಲಾ ಲಂಚದ ಸಮಾಚಾರ ಮೇಲಿನ ಅಧಿಕಾರಿಗಳಿಗೆ ತಿಳಿದು ಆತನನ್ನು ಕೆಲಸದಿಂದ ವಜಾ ಮಾಡಿದರು. ಕೆಲಸ ಹೋದಕೂಡಲೇ ಮತ್ತೆ ಅಡಿಗೆ ಬ್ರಾಹ್ಮಣನನ್ನು ಕೂಗಿ "ಕಾರಣಾಂತರಗಳಿಂದ ನನ್ನ ಕೆಲಸ ಹೋಯಿತು. ಆದ್ದರಿಂದ ಇನ್ನುಮುಂದೆ ಊಟಕ್ಕೆ ಆರುವಿಧ ವ್ಯಂಜನಗಳು ಬೇಡ. ಯಾವುದೋ ಒಂದೆರಡು ಪದಾರ್ಥಗಳೇ ಸಾಕು" ಎಂದು ಹೇಳಿದ ಆತ. "ಹಾಗೇ ಆಗಬಹುದು ಸ್ವಾಮಿ" ಎಂದ ಅಡಿಗೆ ಬ್ರಾಹ್ಮಣ. ಒಂದು ತಿಂಗಳು ಕಳೆಯಿತು. ಸಾಮಾನು ಮುಗಿದು ಹೋಗಿದೆ ಎಂದ ಅಡಿಗೆಯವ. "ಆಗಲೇ ಆಗಿ ಹೋಯಿತೇ" ಎಂದೆನ್ನುತ್ತಾ ಅಡಿಗೆಯವನನ್ನು ಸಂಗಡ ಕರೆದುಕೊಂಡು ಅಡಿಗೆ ಮನೆಗೆ ಹೋಗಿ ನೋಡಿದ. ಬಹುವಿಧವಾದ ಪದಾರ್ಥಗಳು ತಯಾರಾಗಿವೆ. "ಏನಯ್ಯಾ ಎರಡೇ ಎರಡು ಪದಾರ್ಥ ಸಾಕು ಅಂತ ಹೇಳಲಿಲ್ಲವೇ ?" ಎಂದು ಕೇಳಿದ. ಬ್ರಾಹ್ಮಣನು ನಿಧಾನವಾಗಿ "ಹೌದು ಹೇಳಿದಿರಿ ಸ್ವಾಮಿ, ಅದಕ್ಕೆಂತಲೇ ನಿಮಗೆ ಎರಡೇ ಎರಡು ಪದಾರ್ಥ ಬಡಿಸುತ್ತಿದ್ದೇನೆ" ಎಂದ. "ಮತ್ತೆ ಇವೆಲ್ಲಾ ಏನು ?" ಎಂದು ಕೇಳಿದ ಯಜಮಾನ ಆಶ್ಚರ್ಯಚಕಿತನಾಗಿ.

"ನಾನು ಯಥಾಪ್ರಕಾರ ಆರು ವ್ಯಂಜನಗಳನ್ನೇ ಮಾಡುತ್ತಿದ್ದೇನೆ. ಅದರಲ್ಲಿ ನಿಮಗೆ ಎರಡು ಪದಾರ್ಥಗಳನ್ನು ಮಾತ್ರ ಬಡಿಸುತ್ತಿರುವೆನು" ಎಂದ ಬ್ರಾಹ್ಮಣ. "ಏನಿದು, ಏತಿ ಅಂದ್ರೆ ಪ್ರೇತಿ ಅಂತ ನಿನ್ನ ಕೆಲಸ" ಎಂದು ಗದರಿಸಿದ ಯಜಮಾನ. "ಏತಿ ಪ್ರೇತಿ ಏನಿದೆ ಸ್ವಾಮಿ ಇದರಲ್ಲಿ. ನಿಮ್ಮ ಕೆಲಸ ಹೋದುದರಿಂದ ಆ ರೀತಿ ಅಪ್ಪಣೆ ಕೊಡಿಸಿದಿರಿ. ಆದರೆ ನನ್ನ ಉದ್ಯೋಗವೇನೂ ಹೋಗಲಿಲ್ಲವಲ್ಲಾ, ಎರಡೇ ಪದಾರ್ಥ ಉಣ್ಣಲು" ಎಂದ ಆ ಬ್ರಾಹ್ಮಣ. ಬೆಕ್ಕಸ ಬೆರಗಾದ ಯಜಮಾನ. "ನಿಜ. ನಿಜ. ಈ ಕ್ಷಣದಿಂದ ನಿನ್ನ ನೌಕರಿ ಹೋಗುತ್ತೆ" ಎಂದು ಕೂಡಲೇ ಅಡಿಗೆ ಬ್ರಾಹ್ಮಣನಿಗೆ ಬೀದಿ ಬಾಗಿಲು ತೋರಿಸಿದ.

## ಮಾತುಗಾರ ಸನ್ಯಾಸಿ

ಒಂದುಸಾರಿ ಒಬ್ಬ ಸನ್ಯಾಸಿ ರೈಲುಪ್ರಯಾಣ ಬೆಳಸುತ್ತಿರುವಾಗ ಮದ್ದೂರು ಸ್ಟೇಷನ್‌ನಲ್ಲಿ ಟಿಕೀಟು ಕಲೆಕ್ಟರು ತನಿಖೆ ಮಾಡಲು ಬಂದ. ಟಿಕೀಟು 'ಇಲ್ಲ' ಎಂದು ಸನ್ಯಾಸಿ, ನಿಶ್ಚಿಂತೆಯಾಗಿ ಕುಳಿತು ಕೊಂಡ.

"ಇದೇನಯ್ಯಾ ಸನ್ಯಾಸಿ, ಕಾಷಾಯ ವಸ್ತ್ರ ಧರಿಸಿರುವೆ. ಗಡ್ಡ ಬೆಳೆಸಿರುವೆ. ಮೋಸ ಮಾಡುವುದೇ ಮೋಕ್ಷಸಾಧನೆಯ ಮಾರ್ಗವೋ?" ಎಂದ ಟಿಕೀಟು ಕಲೆಕ್ಟರ್. ಅದಕ್ಕೆ ಸನ್ಯಾಸಿ "ನಾನು ಮಾಡಿದ ಮೋಸವೇನಿದೆ? ಸತ್ಯದಲ್ಲೇ ದೇವರಿದ್ದಾನೆ. ಆದುದರಿಂದ ಸತ್ಯಕ್ಕಾಗಿ ಜೀವನವನ್ನೆಲ್ಲಾ ಧಾರೆಯೆರೆಯುವೆವು. ಸನ್ಯಾಸಿಗಳಿಗೆ ಹಣವಿರುವುದಿಲ್ಲವಷ್ಟೆ? ಅದಕ್ಕೆಂತಲೇ ಸಂಸಾರಿಗಳು ಸನ್ಯಾಸಿಗಳನ್ನು ಪೋಷಿಸುತ್ತಾ ಮೋಕ್ಷಮಾರ್ಗವನ್ನು ತಿಳಿಯಬೇಕೆಂದು ಶಾಸ್ತ್ರಗಳಲ್ಲಿ ಬರೆದಿದೆ. ಈ ಸೂತ್ರವನ್ನು ಅನುಸರಿಸಿ, ರೈಲ್ವೇಯವರೂ ಸಹ ನಮ್ಮ ಪ್ರಯಾಣಕ್ಕೆ ಸಹಾಯ ಮಾಡಬೇಕು" ಎಂದು ಉತ್ತರ ಹೇಳಿದ.

"ಟಿಕೀಟು ಪಡೆಯದಿದ್ದವರನ್ನು ಕೆಳಗಿಳಿಸಿಬಿಡಬೇಕೆಂದು ರೈಲ್ವೆ ಕಾನೂನಿದೆ." ಎಂದ ಟಿಕೀಟು ಕಲೆಕ್ಟರ್. "ಸಾವಿರ ಮನೆಗಳಿಗೆ ಹೋಗುವೆವು. ಎಲ್ಲರೂ ಧರ್ಮಾತ್ಮರಿರುತ್ತಾರೆಯೇ? ಕೊಟ್ಟ ತಾಯಿ ಕೊಡುತ್ತಾಳೆ; ಇಲ್ಲವೆಂದು ಕೈ ಆಡಿಸುವವರೂ ಇರುತ್ತಾರೆ" ಎಂದ ಸನ್ಯಾಸಿ. "ರೈಲಿನಿಂದ ಇಳಿಸಿಬಿಟ್ಟ ಕೂಡಲೇ ಮುಗಿಯುವುದಿಲ್ಲ ವ್ಯವಹಾರ. ಕೇಸು ಹೂಡಿ ಜೈಲಿನಲ್ಲಿಡಿಸುವರು" ಎಂದ ಟಿಕೀಟು ಕಲೆಕ್ಟರ್. "ಹಾಗದರೆ ಮತ್ತೂ ಉತ್ತಮ. ಸರಕಾರದವರು ಜೈಲಿನಲ್ಲಿ ವಸತಿ ಏರ್ಪಡಿಸುತ್ತಾರೆ, ಊಟ ಇಡ್ತಾರೆ. ಇದಕ್ಕಿಂತಲೂ ಮತ್ತೇನು ಬೇಕು?" ಎಂದು ಮರು ಪ್ರಶ್ನೆ ಹಾಕಿದ ಸನ್ಯಾಸಿ.

"ಹಾಗಾದ ಪಕ್ಷಕ್ಕೆ ಜೈಲಿನಲ್ಲಿ ನಿಮ್ಮ ದೇವರ ಮಾತೇನಾಯಿತು? ಮೋಕ್ಷಸಂಪಾದಿಸುವುದಾದರೂ ಹೇಗೆ?" ಎಂದು ಪರಿಹಾಸ ಮಾಡಿದ, ಟಿಕೀಟು ಕಲೆಕ್ಟರ್.

"ಮುಗ್ಧನಂತೆ ತೋರುವೆ ನೀನು. ಇಲ್ಲಿರುವ ದೇವರು ಅಲ್ಲಿರುವುದಿಲ್ಲವೇ? ಭಗವಂತ ಸರ್ವಾಂತರ್ಯಾಮಿ. ನಮಗೆ ಸೆರೆಮನೆಯೂ ಒಂದೇ, ಅರಮನೆಯೂ ಒಂದೇ" ಎಂದು ನಸುನಗೆಯಿಂದ ನುಡಿದ ಆ ಸನ್ಯಾಸಿ.

ಬೇರೆ ಪ್ರಶ್ನೆ ಹಾಕಲಾರದೆ ಟಿಕೀಟು ಕಲೆಕ್ಟರ್ ಆ ಪೆಟ್ಟಿಗೆಯಿಂದ ಇಳಿದುಹೋದ.






ಚಂದ್ರನಗರ ರಾಜನಿಗೆ ಚಂಪಕವಲ್ಲಿ ಎಂಬ ಮಗಳಿದ್ದಳು. ಚಂಪಕವಲ್ಲಿಗೆ ಚಿಕ್ಕಂದಿನಿಂದ ಕಣ್ಣು ಮುಚ್ಚಾಲೆಯೆಂದರೆ ತುಂಬಾ ಇಷ್ಟ. ಮಂತ್ರಿಯ ಮಗಳು, ಸೇನಾಧಿಪತಿಯ ಕುವರಿ, ಗುರುವಿನ ಕುಮಾರ್ತೆ, ಇನ್ನೂ ಎಷ್ಟೋ ಜನ ಹುಡುಗಿಯರನ್ನು ಜೊತೆ ಮಾಡಿಕೊಂಡು, ಮುದಿದಾಸಿಯನ್ನು 'ಅಜ್ಜಿ' ಯಾಗಿ ಮಾಡಿಕೊಂಡು, ಉದ್ಯಾನವನದಲ್ಲಿ ಬೆಳಗ್ಗೆಯಿಂದ ಸಂಜೆವರೆವಿಗೆ ಕಣ್ಣು ಮುಚ್ಚಾಲೆ ಆಡುವಳು ರಾಜಕುಮಾರಿ. ಆಟದಲ್ಲಿ ಅವಿತಿಟ್ಟುಕೊಂಡಿರುವಾಗ ಚಂಪಕವಲ್ಲಿಯನ್ನು ಇತರರು ಸುಲಭವಾಗಿ ಕಂಡು ಹಿಡಿಯಲು ಅಶಕ್ತರಾಗುತ್ತಿದ್ದರು. ಬಹಳ ಹೊತ್ತು ಗೋಳಾಡಿಸಿ, ಕಡೆಗೆ ಆ ಹುಡುಗಿಯೇ ತಾನು ಅಡಗಿಕೊಂಡಿದ್ದ ಪೊದೆಯಿಂದ ಕೋಗಿಲೆಯಂತೆ 'ಕೂಹೂ' ಎಂದು ರಾಗವೆಳೆದು ಸಿಕ್ಕಿಬೀಳುವಳು. ತಾನು 'ಕಳ್ಳಿ' ಯಾದಾಗ ಮಾತ್ರ ಇತರರನ್ನು ಸುನಾಯಾಸವಾಗಿ ಕಂಡು ಹಿಡಿದು ಬಿಡುವಳು.

ಶುಕ್ಲಪಕ್ಷದ ಚಂದ್ರನಂತೆ ಚಂಪಕವಲ್ಲಿ ಬೆಳೆದು ದೊಡ್ಡವಳಾಗಿ, ಹದಿನೇಳು ವರ್ಷದ ಯುವತಿಯಾದಳು. ಆಕೆಗೆ ಮದುವೆಯ ವಯಸ್ಸು ಪ್ರಾಪ್ತವಾಯಿತೆಂದು ಒಂದುದಿನ ರಾಣಿ ರಾಜನಿಗೆ ತಿಳಿಸಿದಳು.

ಆತ ನಂಬಲಿಲ್ಲ. 'ಸಣ್ಣ ಮಕ್ಕಳಂತೆ ಕಣ್ಣು ಮುಚ್ಚಾಲೆ ಆಡುವ ವಯಸ್ಸು ಮೀರಿಲ್ಲ. ಆಗಲೇ ವಿವಾಹ ವಯಸ್ಸು ಬಂದಿದೆ ಎಂದು ಹೇಳುವೆ ನೀನು!" ಎಂದ ರಾಜ.

"ಕಣ್ಣು ಮುಚ್ಚಾಲೆಗೇನು ಬಿಡಿ. ಮದುವೆಯಾಗಿ, ಮಕ್ಕಳ ತಾಯಂದಿರಾದರೂ ಸಹ ಕೆಲವರು ಆಟಗಳಲ್ಲಿ ಮುಳುಗಿರುತ್ತಾರೆ" ಎಂದಳು ರಾಣಿ. "ಸರಿ ಹಾಗಾದರೆ ಚಪ್ಪನ್ನಾರು ದೇಶದ ರಾಜಕುಮಾರರಲ್ಲಿ ಯಾರನ್ನು ಮದುವೆಯಾಗುವಳೋ ನಿನ್ನ ಮಗಳನ್ನು ಕೇಳಿ ತಿಳಿದುಕೋ" ಎಂದ ರಾಜ. ಆಗ ರಾಣಿ ಮಗಳನ್ನು ಕರೆದು "ನನ್ನ ಬಂಗಾರದ ಬೊಂಬೆ. ಚಪ್ಪನ್ನಾರು ದೇಶದ ರಾಜ

ಶ್ರೀಮತಿ ಪಂಕಜಮ್ಮ, ರಾಮನಗರ

ಕುಮಾರರಲ್ಲಿ ಯಾರೇ ನಿನ್ನ ಗಂಡ?" ಎಂದು ಲಾಲಿಸಿ ಕೇಳಿದಳು.

ಅದಕ್ಕೆ ಚಂಪಕವಲ್ಲಿ "ಯಾರೇನು ಬಂತು. ನಾನು ಅವಿತಿಟ್ಟುಕೊಂಡಿರುವಾಗ ಯಾವ ರಾಜಕುಮಾರನು ನನ್ನನ್ನು ಕಂಡು ಹಿಡಿಯುತ್ತಾನೋ ಅವನೇ ನನ್ನ ಪತಿ" ಎಂದಳು.

ರಾಣಿ ಈ ಮಾತನ್ನು ರಾಜನಿಗೆ ತಿಳಿಸಿದಳು. ರಾಜನು ಚಪ್ಪನ್ನಾರು ದೇಶದ ರಾಜಕುಮಾರರಿಗೆಲ್ಲಾ ಈ ವಿಷಯ ತಿಳಿಯುವಂತೆ ಡಂಗೂರ ಹೊಡೆಸಿದ.

ರಾಜಕುಮಾರರು ದಿನಾ ಗುಂಪು ಗುಂಪಾಗಿ ಬರುವುದೂ, ಚಂಪಕವಲ್ಲಿಯನ್ನು ಹುಡುಕುವುದೂ, ಆಕೆಯನ್ನು ಕಂಡು ಹಿಡಿಯಲಾರದೆ ಪೆಚ್ಚುಮುಖ ಹಾಕಿಕೊಂಡು ಮನೆ ದಾರಿ ಹಿಡಿಯುವುದೂ, ಹೀಗೇ ನಡೆಯುತಿತ್ತು. ಯಾವ ರಾಜಕುಮಾರನೂ ಕಂಡು ಹಿಡಿಯದಿದ್ದರೆ ತನ್ನ ಮಗಳಿಗೆ ಮದುವೆಯೇ ಆಗಲಾರದೇನೋ ಎಂದು ರಾಣಿಗೆ ಭಯವುಂಟಾಯಿತು.

"ಹೋಗಲೀ ಬಿಡೇ ಅಮ್ಮಾ, ಮದುವೆಯಾಗದಿದ್ದರೆ ಹಾಯಾಗಿ ಕಣ್ಣುಮುಚ್ಚಾಲೆಯಾಡಿಕೊಂಡು ನಮ್ಮ ಉದ್ಯಾನವನದಲ್ಲೇ ಇದ್ದುಬಿಡುತ್ತೇನೆ" ಎಂದಳು ಚಂಪಕವಲ್ಲಿ. ಚಂಪಕವಲ್ಲಿ ಬಾಯಿಯಲ್ಲಿ ಹಾಗೇನೋ ಹೇಳಿದಳು. ಆದರೆ ಮನಸ್ಸಿನಲ್ಲಿ ಮಾತ್ರ ಮದುವೆಯಾಗಬೇಕೆಂಬ ಅಭಿಲಾಷೆ ಇದ್ದೇ ಇತ್ತು. ಪಾಂಚಾಲದೇಶದ ರಾಜಕುಮಾರ ಭಾನುಕುಮಾರನು ತುಂಬಾ ಸುರೂಪಿ



ಯೆಂದೂ, ತನ್ನಂತೆಯೇ ಆತನಿಗೂ ಸಹ ಆಟಪಾಠಗಳೆಂದರೆ ಪ್ರೀತಿಯೆಂದೂ ಆಕೆ ಕೇಳಿದ್ದಳು. "ಮಾಡಿಕೊಂಡರೆ ಆತನನ್ನೇ ಮದುವೆಯಾಗಬೇಕು" ಎಂದು ನಿಶ್ಚಯಿಸಿದಳು ಆಕೆ. "ಭಾನುಕುಮಾರನು ನನ್ನನ್ನು ಹುಡುಕಲು ಇದುವರೆವಿಗೂ ಬರಲಿಲ್ಲವಲ್ಲಾ ಏಕೆ" ಎಂದುಕೊಳ್ಳುತ್ತಾ ಆತನಿಗಾಗಿ ಎದುರು ನೋಡುತ್ತಿದ್ದಳು.

ಭಾನುಕುಮಾರನಿಗೂ ಈ ಪ್ರಕಟನೆಯ ವಿಷಯ ಗೊತ್ತು. ಚಂಪಕವಲ್ಲಿಯನ್ನು ಹೇಗಾದರೂ ಕಂಡು ಹಿಡಿದು ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡ. ಆದರೆ ತನಗಿಂತಲೂ ದೊಡ್ಡವರೆನಿಸಿದ ರಾಜಕುಮಾರರೆಲ್ಲಾ 'ಕೈಲಾಗದವರೆಂದು' ಹಿಂದಿರುಗಿ ಬರುತ್ತಿರುವಾಗ ತನಗೆ ಮಾತ್ರ ಈ ಕೆಲಸ ಸಾಧ್ಯವಾಗುವುದೇ ಎಂದು ಯೋಚಿಸಿ ಸುಮ್ಮನಿದ್ದ.



ಭಾನುಕುಮಾರನಿಗೆ ಸ್ನೇಹಸಾಗರನೆಂಬ ಸ್ನೇಹಿತನೊಬ್ಬನಿದ್ದ. ಆತನು ರಾಜಕುಮಾರನೊಂದಿಗೆ "ಇಲ್ಲಿ ಕುಳಿತುಕೊಂಡು ಹೀಗೆ ಮೀನಮೇಷ ನೋಡುತ್ತಿದ್ದರೆ ಕೆಲಸವಾಗುವುದೇ? ಬಾ, ಹೊರಡು. ಇತರರಿಗೆ ಸಾಧ್ಯವಾಗದ ಕೆಲಸ ನಿನಗೂ ಅಸಾಧ್ಯವೆಂದು ತಿಳಿಯಬೇಡ. ನೀನು ಖಂಡಿತ ಯಶಸ್ವಿಯಾಗುವೆ. ನನಗೆ ಗೊತ್ತು" ಎಂದು ಹುರಿದುಂಬಿಸಿದ. ಭಾನುಕುಮಾರನನ್ನು ಚಂದ್ರನಗರಕ್ಕೆ ಎಳೆದುಕೊಂಡು ಬಂದ.

ಭಾನುಕುಮಾರನು ಬಂದ ದಿವಸವೇ ಮತ್ತೆ ಆರು ಜನ ರಾಜಕುಮಾರರೂ ಬಂದರು. ರಾಜನು ಆ ಏಳು ಜನರನ್ನೂ ನೋಡಿ "ಇದುವರೆವಿಗೆ ಒಬ್ಬ ರಾಜಕುಮಾರನೂ ನಮ್ಮ ರಾಜಕುಮಾರಿಯನ್ನು ಕಂಡುಹಿಡಿಯಲಾರದೆ ಹೋದರು. ನೀವೂ ಅಷ್ಟೇ. ಆದರೂ ಇಷ್ಟು ದೂರ ಬಂದಿರುವಿರಾದ್ದರಿಂದ ಹುಡುಕಿಕೊಳ್ಳಿ" ಎಂದ. ಚಂಪಕವಲ್ಲಿ ಅವಿತಿಟ್ಟುಕೊಂಡು 'ಜೂಟ್' ಎಂದಕೂಡಲೇ ಅವರನ್ನು ಉದ್ಯಾನವನದೊಳಕ್ಕೆ ಬಿಟ್ಟರು.

ಭಾನುಕುಮಾರನೂ, ಮತ್ತಿತರ ಆರು ರಾಜಕುಮಾರರೂ ತಲಾ ಒಂದೊಂದು ಕಡೆಗೆ ಹೋಗಿ ಹುಡುಕಿದರು. ಮರಗಳ ಮೇಲೆ ನೋಡಿದರು. ಪೊದೆಗಳಲ್ಲಿ ನೋಡಿದರು. ಅಲ್ಲೇನು, ಇಲ್ಲೇನು? ಎಲ್ಲಾ ಕಡೆಗಳಲ್ಲಿಯೂ ಅನ್ವೇಷಣೆ ಮಾಡಿದರು. ಸುತ್ತಿಸುತ್ತಿ ಜೋಡುಗಳು ಸವೆದು ಹೋದವು. ಅಷ್ಟೇ ಹೊರತು ಅವರು ಯಾರೂ ಚಂಪಕವಲ್ಲಿಯ ಸುಳಿವನ್ನು ತಿಳಿಯದಾದರು.

ರಾಣಿಗೆ ಈ ಬಾರಿ ಮತ್ತಷ್ಟು ಹೆದರಿಕೆ ಆಯಿತು. ಅಂದು ಬಂದ ರಾಜಕುಮಾರರನ್ನು ಬಿಟ್ಟರೆ ಇನ್ನು ಬರಬೇಕಾದ ರಾಜಕುಮಾರರು ಬೇರೆ ಯಾರೂ ಇರಲಿಲ್ಲ. ಹಾಗಾದರೆ ಚಂಪಕವಲ್ಲಿಯ ಮಾತೇನು? ಇದೇ ಆಕೆಯನ್ನು ಕಾಡುತ್ತಿದ್ದ ಭೀತಿ. "ಮಗಳೇ, ಇಲ್ಲದ ಸಲ್ಲದ ಹಠಬಿಟ್ಟು, ಈ ಏಳು ಜನ ರಾಜಕುಮಾರರಲ್ಲಿ ಯಾರು ನಿನಗೆ ಅನುರೂಪನೆಂದು ತೋರುವರೋ ಅವನನ್ನು ಆರಿಸಿಕೊ" ಎಂದು ಮಮತೆಯಿಂದ ಕೇಳಿಕೊಂಡಳು.

"ಅದೆಂತಹ ಮಾತಮ್ಮಾ. ಹಾಗೆಬೇಕಾಗಿದ್ದರೆ ಅವರನ್ನೇ ನಾಳೆ ಸಹ ಬಂದು ಹುಡುಕುವಂತೆ ಹೇಳು. ನನ್ನನ್ನು ಕಂಡುಹಿಡಿದಾತನನ್ನು ಹೊರತು ಬೇರೆಯವರ ಕೈಹಿಡಿಯ

ಲಾರೆ" ಎಂದು ತನ್ನ ನಿರ್ಧಾರವನ್ನು ಹೇಳಿ ಬಿಟ್ಟಳು, ಚಂಪಕವಲ್ಲಿ.

ಮರುದಿನ ಬೆಳಗ್ಗೆ ಭಾನುಕುಮಾರ ಸ್ನೇಹ ಸಾಗರನೊಂದಿಗೆ ನದಿಯ ದಡಕ್ಕೆ ಹೋಗಿ "ಒಂದಲ್ಲ, ನೂರುಬಾರಿ ಅವಕಾಶ ಕೊಟ್ಟರೂ ಚಂಪಕವಲ್ಲಿಯನ್ನು ಕಂಡುಹಿಡಿಯಲಾರೆವು" ಎಂದು ನಿಟ್ಟುಸಿರನ್ನು ಬಿಡುತ್ತಾ ಕುಳಿತು ಕೊಂಡ. ಸ್ನೇಹಸಾಗರನು "ಏನು ಮಾಡಿದರೆ ಸರಿಹೋಗುವುದು" ಎಂದು ಆಲೋಚನಾ ಮಗ್ನನಾದ.

ಇಷ್ಟರಲ್ಲಿ ಕಣ್ಣುಮುಚ್ಚಾಲೆ ಆಟದಲ್ಲಿ ಕಣ್ಣು ಮುಚ್ಚುತ್ತಿದ್ದ ಮುದುಕವ್ವ ಆ ಹಾದಿಯಲ್ಲಿ ಹೋಗುತ್ತಿರುವಂತೆ ಅಲ್ಲಿಗೆ ಬಂದು, ಏನೂ ಅರಿಯದವಳಂತೆ 'ಯಾರಯ್ಯಾ, ನೀವು?' ಎಂದಳು.

"ರಾಜಕುಮಾರಿಯನ್ನು ಹುಡುಕಲು ಬಂದ ಏಳು ಜನ ರಾಜಕುಮಾರರಲ್ಲಿ ನಾನೊಬ್ಬ" ಎಂದ ಭಾನುಕುಮಾರ.

ಅದಕ್ಕೆ ಮುದುಕಿ "ಓಹೋ, ಹಾಗೋ, ನಿನ್ನೆ ನೀವೆಲ್ಲಾ ಹುಡುಕುತ್ತಿರುವಾಗ ನಾನು ಆ ಉದ್ಯಾನವನದಲ್ಲೇ ಇದ್ದೇ. ನಾನು ಎಂಟು ಜನ ರಾಜಕುಮಾರರನ್ನು ನೋಡಿದಂತೆ ಜ್ಞಾಪಕ. ಹಿಹ್ಹಿಹ್ಹೀ....ಈ ರಾಜಕುಮಾರರೆಲ್ಲಾ ಇಷ್ಟೇ. ತೊಂಬತ್ತು ವರ್ಷದ ಮುದುಕಿ ನನಗಿರುವಷ್ಟು ಜ್ಞಾಪಕಶಕ್ತಿ ಸಹ ಇವರಿಗಿಲ್ಲ. ಆಗಲೇ ಇಷ್ಟೊಂದು ಮರೆವು" ಎಂದು ನಗುತ್ತಾ ಹೊರಟು ಹೋದಳು. ಸ್ನೇಹಸಾಗರನು ಭಾನುಕುಮಾರನೊಂದಿಗೆ "ಏನಯ್ಯಾ



ಮಿತ್ರ, ನೀನು ಏಳು ಜನವೆಂದರೆ ಆ ಮುದುಕಿ ಎಂಟು ಎಂದು ವಾದಿಸಿದಳಲ್ಲಾ" ಎಂದು ಕೇಳಿದ.

"ಹೋಗಲಿ, ಬಿಡು. ಹುಚ್ಚಳ ಮಾತಿಗೇನು? ಇಷ್ಟಕ್ಕೂ ಏಳು ಜನರಾದರೇನು, ಎಂಟಾದರೇನು? ರಾಜಕುಮಾರಿಯನ್ನು ಕಂಡು ಹಿಡಿಯದಿದ್ದಮೇಲೆ?" ಎಂದ ಭಾನುಕುಮಾರ ನಿರುತ್ಸಾಹದಿಂದ. ಗಂಟೆ ಹೊಡೆಯುವ ವೇಳೆಗೆ ಭಾನುಕುಮಾರನು ಮಿಕ್ಕ ಆರು ಜನ ರಾಜಪುತ್ರರೊಂದಿಗೆ ಉದ್ಯಾನವನದ ಬಾಗಿಲ ಹತ್ತಿರ ಹಾಜರಾದ. "ಇನ್ನು ಹುಡುಕಬಹುದು. ತೋಟದೊಳಕ್ಕೆ ಹೋಗಿ" ಎಂದು ರಾಜ ಅಪ್ಪಣೆ ಕೊಟ್ಟ. ಒಳಗೆ ಪ್ರವೇಶಿಸುವ ಸಮಯದಲ್ಲಿ ಭಾನುಕುಮಾರನಿಗೆ ಮುದುಕಿಯ ಮಾತು ಜ್ಞಾಪಕಕ್ಕೆ

ಬಂತು. ಎಷ್ಟು ಜನರಿದ್ದಾರೋ ಎಂದು ಒಂದು ಸಾರಿ ಎಣಿಸಿ ನೋಡಿದ. 'ನಾನು ಹೇಳಿದ್ದೇ ಸರಿ. ನಾವು ಏಳು ಜನ. ಮುದುಕಿಯ ಮಾತು ಮತಿಯಿಲ್ಲದ ಮಾತು' ಎಂದುಕೊಂಡ.

ಅವರು ಉದ್ಯಾನವನದ ದಶದಿಕ್ಕುಗಳಿಗೂ ಹೋಗಿ ನೋಡಿದರು. ಮದುಮಗಳು ಕಾಣಿಸಲಿಲ್ಲವೆಂದು ಬೇಸತ್ತು ಜಲಕ್ರೀಡೆಯಾಡುವ ಕೊಳದಬಳಿ ಎಲ್ಲರೂ ಬಂದು ಸೇರಿದರು. ಭಾನುಕುಮಾರ ಮತ್ತೊಂದು ಸಾರಿ ಲೆಕ್ಕ ಮಾಡಿದ. ಎಂಟು ಜನರಿದ್ದಾರೆ. ಇದೇನಿದು ಆಶ್ಚರ್ಯ. ಏಳು ಜನ ಎಂಟು ಜನರಾದುದಾದರೂ ಹೇಗೆ? ಇದರಲ್ಲೇನೋ ರಹಸ್ಯವಿರಲೇ ಬೇಕು. ಮುದುಕಿ ಅದೇ ಕೆಲಸವಾಗಿ ಬಂದು ಹೇಳಿರಬೇಕು ಎಂದುಕೊಂಡ ಭಾನುಕುಮಾರ. ಮಿಕ್ಕ ಏಳು ಜನ ಅಲ್ಲಿ ಕುಳಿತುಕೊಂಡು ದಿಕ್ಕು ದಿಕ್ಕು ನೋಡುತ್ತಿದ್ದರು. ಆದರೆ ಭಾನುಕುಮಾರ ಆ ರೀತಿ ಮಾಡಲಿಲ್ಲ. ಆ ಏಳು ಜನರ ಮುಖಗಳನ್ನು ಪರಿಶೀಲಿಸಿ ನೋಡಲು ಅವರಲ್ಲಿ ಒಬ್ಬನ ಮುಖ ತೀರಾ ಹೊಸದಾಗಿ ಕಾಣಿಸಿತು. ಆತನು ನಸುನಗೆಯಿಂದ ಆ ಹೊಸಬನ ಬಳಿಗೆ ನೆಟ್ಟಗೆ ಹೋಗಿ ಕೈ ಹಿಡಿದುಕೊಂಡ. "ಯಾವ ದೇಶದ ರಾಜಕುಮಾರರು ನೀವು?" ಎಂದು ಕೇಳಿದ.

ಆ ರಾಜಕುಮಾರನ ವೇಷದಲ್ಲಿದ್ದ ಚಂಪಕವಲ್ಲಿ ಕೋಪವನ್ನು ನಟಿಸುತ್ತಾ "ನಮ್ಮದು ಯಾವ ದೇಶವಾದರೆ ನಿಮಗೇಕೆ? ರಾಜಕುಮಾರಿಯನ್ನು ಹೋಗಿ ಹುಡುಕಿ" ಎಂದು ಕೈ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. "ನಾನು ಬೇಕೆಂತಲೇ ಕೇಳುತ್ತಿದ್ದೇನೆ. ಹೇಳಿ ಮೊದಲು. ರಾಜಕುಮಾರಿಯನ್ನು ನಿಧಾನವಾಗಿ ಹುಡುಕಬಹುದು. ಅವಸರವೇನಿಲ್ಲ" ಎಂದು ನಗುತ್ತಾ ಆ ಹೊಸರಾಜಕುಮಾರನ ತಲೆಯಮೇಲಿದ್ದ ರುಮಾಲನ್ನು ತೆಗೆದುಬಿಟ್ಟ.

ಇದನ್ನು ಕಂಡು ಮಿಕ್ಕ ರಾಜಕುಮಾರರು ರಾಜಕುಮಾರಿಯೊಂದಿಗೆ "ಅಲೆಲೆ, ಕಳ್ಳಿ ನೀನೂ ನಮ್ಮೊಂದಿಗೆ ಪುರುಷವೇಷದಲ್ಲಿ ಹುಡುಕುತ್ತಿರುವೆಯಾ? ಇದೇ ಏನು ನಮ್ಮನ್ನು ಮೋಸಗೊಳಿಸಲು ಹೂಡಿದ ಉಪಾಯ?" ಎಂದು ಆಕೆಯ ಚತುರತೆಗೆ ಮೆಚ್ಚಿಕೊಂಡರು.



# ಒಂದೇ ಗೆರೆಯ ಚಿತ್ರ



ಬರೆದವರು:— ಟಿ. ವಿ. ರಂಗಸ್ವಾಮಿ, ಆರನಿ.

ಒಂದು ಚುಕ್ಕೆಯಿಂದ ಶುರುಮಾಡಿ, ಲೇಖಣಿಯನ್ನು ಎತ್ತದೆಯಂತೆಯೂ, ಮತ್ತು ಬರೆದ ಗೆರೆಯಮೇಲೆ ಮತ್ತೆ ಬರೆಯದಂತೆಯೂ, ಚಿತ್ರವನ್ನು ಬರೆಯುತ್ತಾ ಹೋಗಿ. ಮೇಲಿನದು ಅಂತಹುದೇ. ನೀವೂ ಕೂಡಪ್ರಯತ್ನಿಸಿ ಇಂತಹದೇ ಚಿತ್ರಗಳನ್ನು ಬರೆದು ನಮಗೆ ಕಳುಹಿಸಿ. ಚೆನ್ನಾಗಿದ್ದರೆ ನಾವು ಪ್ರಕಟಿಸುವೆವು.

# ಮುಖಚಿತ್ರ



ಭಾವಮೈದುನನಾದ ಶ್ರೀಕೃಷ್ಣನ ಕೈಯಿಂದ ರುಕ್ಮಿ ಪರಾಭವ ಹೊಂದಿದ ವಿಷಯ ನಾವು ಈಗಾಗಲೇ ಓದಿರುವೆವು. ಇದರಿಂದ ರುಕ್ಮಿಗೂ, ಕೃಷ್ಣನಿಗೂ ವೈರ ಬೆಳೆಯಿತು. ಅದೇನೋ ವಾಸ್ತವ. ಆದರೂ ರುಕ್ಮಿಗೆ ರುಕ್ಮಿಣಿ ತಂಗಿಯಲ್ಲವೇ? ತಂಗಿಯಮೇಲಿನ ಪ್ರೀತಿ ಎಲ್ಲಿಗೆ ಹೋಗುತ್ತದೆ? ರುಕ್ಮಿಗೆ ರುಕ್ಮಾವತಿಯೆಂಬ ಮಗಳೂ, ರುಕ್ಮಿಣಿಗೆ ಪ್ರದ್ಯುಮ್ನನೆಂಬ ಕುಮಾರನೂ ಇದ್ದರು. ಉಭಯರಿಗೂ ವಿವಾಹವಾಯಿತು. ಅವರಿಗೆ ಅನಿರುದ್ಧನೆಂಬ ಮಗ ಜನಿಸಿದ.

ಅನಿರುದ್ಧನಿಗೆ ಯುಕ್ತ ವಯಸ್ಸು ಬಂದ ಕೂಡಲೇ ರೋಚನೆ ಎಂಬ ಕನ್ಯೆಯನ್ನು ಕೊಟ್ಟು ವಿವಾಹ ಮಾಡಲು ಅತಿ ವೈಭವದಿಂದ ಏರ್ಪಾಟುಗಳು ನಡೆದವು. ಕಾಳಿಂಗನೇ ಮುಂತಾದ ರಾಜರು ಮದುವೆಗೆ ಬಂದಿದ್ದರು. ಮದುವೆಯ ಸಂಭ್ರಮದಲ್ಲಿ ಹುಡುಗರೆಲ್ಲರೂ ಆಟ ನೋಟ ಗಳಲ್ಲಿ ಮುಳುಗಿ ಸಂತೋಷ ಪಡುತ್ತಿದ್ದರು. ಹಿರಿಯರೂ ಸಹ ತಮ್ಮ ತಮ್ಮ ಮನಸ್ಸಿಗೆ ಒಂದು ಮೋಜುಗಳನ್ನು ತೀರಿಸಿಕೊಳ್ಳುತ್ತಿದ್ದರು.

ಈ ಸಂದರ್ಭದಲ್ಲಿ 'ಬಲರಾಮನೊಂದಿಗೆ ಜೂಜಾಡಿ ಗೆಲ್ಲಬಲ್ಲೆಯಾ?' ಎಂದು ಕೇಳಿದರು ಕಳಿಂಗ ಮುಂತಾದ ರಾಜರು ರುಕ್ಮಿಯನ್ನು. ಆತನಿಗೆ ಆಟ ತಿಳಿಯದಿದ್ದರೂ ಸಹ 'ಸರಿ' ಎಂದು ಸಿದ್ಧನಾದ. ಮೊದಲು ಆಡಿದ ಹತ್ತು, ನೂರು, ಸಾವಿರದ ಪಂದ್ಯಗಳನ್ನು ರುಕ್ಮಿ ಗೆದ್ದ. ಇದನ್ನು ಕಂಡು ಕಳಿಂಗನು ಪಕಪಕನೆ ನಕ್ಕು ಬಲರಾಮನನ್ನು ಅಪಹಾಸ್ಯ ಮಾಡಿದ. ಬಲರಾಮ ಉರಿದುಬಿದ್ದ. ಮುಂದಿನ ಪಂದ್ಯದಲ್ಲಿ ಬಲರಾಮ ಲಕ್ಷಗಟ್ಟಳೆ ಗೆದ್ದ. ಆದರೂ "ನಾನೇ ಗೆದ್ದೆ" ಎಂದು ರುಕ್ಮಿ ಸುಳ್ಳಾಡಿದ. ಬಲರಾಮ ಕುಪಿತನಾದ. ಅದರ ಮುಂದಿನ ಪಂದ್ಯದಲ್ಲಿ ಬಲರಾಮ ಹತ್ತು ಕೋಟಿ ಗೆದ್ದ. ಆಗಲೂ "ನಾನೇ ಗೆದ್ದೆ" ಎಂದು ರುಕ್ಮಿ ಮತ್ತೆ ದಬಾಯಿಸಿದ. "ಬೇಕಾದರೆ ಇಲ್ಲಿ ನೆರೆದಿರುವ ದೊಡ್ಡ ಮನುಷ್ಯರನ್ನು ಕೇಳು" ಎಂದು ಬೇರೆ ಹೇಳಿದ.

ಅಷ್ಟರಲ್ಲಿ "ಬಲರಾಮ ಗೆದ್ದ; ರುಕ್ಮಿಯ ಮಾತು ಮಿಥ್ಯ" ಎಂದು ಆಕಾಶವಾಣಿ ನುಡಿಯಿತು. ಆದರೂ ರುಕ್ಮಿ ಲೆಕ್ಕಮಾಡಲಿಲ್ಲ. "ಅಯ್ಯಾ ನೀವು ಅಡವಿಗಳಲ್ಲಿ ತಿರುಗಾಡುವ ಗೋವಳರು. ನೀವೇನು ಅಕ್ಷವಿದ್ಯೆಯಲ್ಲಿ ಪ್ರವೀಣರಲ್ಲ" ಎಂದು ಬಲದೇವನನ್ನು ಪರಿಹಾಸ ಮಾಡಿದ. ಅಲ್ಲಿ ನೆರೆದಿದ್ದ ರಾಜರು ಈ ಮಾತಿಗೆ ತಾಳ ಹಾಕಿದರು.

ಆಗ ಬಲರಾಮನು ರೊಚ್ಚಿಗೆದ್ದು ರುಕ್ಮಿಯನ್ನು ಒಂದೇ ಏಟಿಗೆ ಕೊಂದು, ಓಡಿಹೋಗುತ್ತಿದ್ದ ಕಳಿಂಗನನ್ನು ಹತ್ತು ಹೆಜ್ಜೆಗಳಲ್ಲಿ ಹಿಡಿದು, ಯಾವ ಹಲ್ಲು ಕಿರಿದು ತನ್ನನ್ನು ಪರಿಹಾಸ ಮಾಡಿದನೋ ಅದೇ ಹಲ್ಲುಗಳನ್ನು ಪಟಪಟ ಉದುರುವಹಾಗೆ ಉದುರಿಸಿದ. ಮಿಕ್ಕ ರಾಜರು ಬಲರಾಮನ ಮುಂದೆ ನಿಲ್ಲಲಾರದೆ ಓಡಿದರು.

ಒಂದು ಗಾಜಿನ ಲೋಟ ತುಂಬಾ ನೀರು ತೆಗೆದುಕೋ. ಆ ಗ್ಲಾಸಿನಲ್ಲಿ ಮುಳುಗಲು ಆಗುವಷ್ಟು ಬ್ಲಾಟಿಂಗ್ ಪೇಪರ್ ಚೂರು ಒಂದು ತೆಗೆದುಕೊ. ಆ ಚೂರನ್ನು ನೀರಿನಮೇಲೆ ಹಾಕು. ಕೂಡಲೇ ಆ ಕಾಗದ ನೀರನ್ನು ಹೀರಿ ತೇಲುತ್ತಿರುವುದು. ಆಗ ಒಂದು ಗುಂಡು ಸೂಜಿ ತೆಗೆದುಕೊಂಡು ಆ ಕಾಗದದಮೇಲೆ ಹಾಕು. ಮತ್ತೊಂದು ಗುಂಡು ಸೂಜಿಯಿಂದ ಬ್ಲಾಟಿಂಗ್ ಪೇಪರನ್ನು ಒಂದು ಮೂಲೆಗೆ ಮೆಲ್ಲನೆ ನೀರಿನಲ್ಲಿ ತಳ್ಳಿ ಬಿಟ್ಟುಬಿಡು. ಕೂಡಲೇ ಬ್ಲಾಟಿಂಗ್ ಪೇಪರ್ ಚೂರು ನೀರಿನ ತಳ ಸೇರುವುದು. ಆದರೆ ಗುಂಡು ಸೂಜಿ ಮಾತ್ರ ಹಾಗೇ ನೀರಿನಮೇಲೆ ತೇಲುತ್ತಿರುವುದು.

* * *

ಬಿಳಿಯ ಕಾರ್ಡೊಂದನ್ನು ತೆಗೆದುಕೊಂಡು, ಅದರಿಂದ ಗುಂಡನೆಯ ಬಿಲ್ಲೆಯನ್ನು ಕತ್ತರಿಸು. ಅದರ ಒಂದುಕಡೆ ಪೂರ್ತಿಯಾಗಿ ಕಪ್ಪುಬಣ್ಣ (ಇಂಡಿಯನ್ ಇಂಕ್) ಬಳಿ. ಬಿಲ್ಲೆಗೆ ಮಧ್ಯ ಗುಂಡು ಸೂಜಿಯಿಂದ ಒಂದು ರಂಧ್ರ ಮಾಡು. ಈಗ ಕಪ್ಪು ಬಣ್ಣದಕಡೆಯನ್ನು ನಿನ್ನ ಕಣ್ಣ ಹತ್ತಿರ ಇಟ್ಟುಕೊ. ಯಾವುದಾದರೊಂದು ಪುಸ್ತಕದ ಪೇಜು ತೆಗೆದುಕೊಂಡು ಆ ಬಿಲ್ಲೆಗೆ ಒಂದು ಅಂಗುಲದಷ್ಟು ಹತ್ತಿರ ತಂದು ನೋಡು. ಅಕ್ಷರಗಳು ನಾಲ್ಕು ಐದರಷ್ಟು ದೊಡ್ಡದಾಗಿ ಕಾಣಿಸುತ್ತವೆ.

* * *

# ಮಾಡಿ ನೋಡಿ

ಒಂದು ಸಣ್ಣ ಹಾಳೆಯನ್ನು ತೆಗೆದುಕೊಂಡು ಅದನ್ನು ಚೂರು ಚೂರಾಗಿ ಹರಿದು ಇಟ್ಟುಕೊಂಡಿರು. ಒಂದು ಪ್ಲಾಸ್ಟಿಕ್ ಬಾಚಣಿಗೆ ತೆಗೆದುಕೊ. ಅದನ್ನು ರೇಷ್ಮೆ ಪಂಚೆಯಮೇಲೆ ಕಾವುಂಟಾಗುವಂತೆ ಜೋರಾಗಿ ತಿಕ್ಕು. ಈಗ ಬಾಚಣಿಗೆಯನ್ನು ಆ ಕಾಗದದ ಚೂರುಗಳ ಹತ್ತಿರವಿಟ್ಟರೆ, ಅದು ಹಾರಿ ಬಂದು ಬಾಚಣಿಗೆಗೆ ಅಂಟಿಕೊಳ್ಳುವುವು.

* * *

ಕೆಳಗೆ ಕಾಣಿಸಿರುವ ಚಿತ್ರವನ್ನು 1 ರಿಂದ ಪ್ರಾರಂಭಮಾಡಿ, ಕಾಗದದ ಮೇಲಿಂದ ಸೀಸದ ಕಡ್ಡಿ ಎತ್ತದೆ, ಎಳೆದ ಗೆರೆಯಮೇಲೆ ಮತ್ತೆ ಗೆರೆ ಎಳೆಯದೆ 2ರ ವರೆವಿಗೂ ಎಳೆಯ ಬೇಕು. ನೀವು ಆರೀತಿ ಗೆರೆ ಎಳೆಯ ಬಲ್ಲಿರಾ? ಪ್ರಯತ್ನಮಾಡಿ. ನಿಮಗೆ ಸಾಧ್ಯವಾಗ ದಿದ್ದರೆ 56ನೇ ಪುಟ ನೋಡಿ.






## ಖಾಲಿಡಬ್ಬಿಯಲ್ಲಿ ಪೆಪ್ಪರಮೆಂಟ್ ತರಿಸುವುದು

ಇಂದ್ರಜಾಲಕನು ತಗಡಿನಿಂದ ಮಾಡಿದ ಒಂದು ಡಬ್ಬಿಯ ಮುಚ್ಚಳವನ್ನು ತೆರೆದು ಪ್ರೇಕ್ಷಕರ ಹತ್ತಿರ ತೆಗೆದುಕೊಂಡು ಹೋಗಿ ತೋರಿಸುವನು. ಪ್ರೇಕ್ಷಕರು ಎಷ್ಟೇ ಸೂಕ್ಷ್ಮವಾಗಿ ಪರಿಶೀಲಿಸಿದರೂ ಅದರಲ್ಲೇನೂ ಕಾಣಿಸುವುದಿಲ್ಲ. ಪ್ರೇಕ್ಷಕರು ಪರಿಶೀಲಿಸಿದ ತರುವಾಯ ಆ ಡಬ್ಬಿಯನ್ನು ತನ್ನ ಮೇಜಿನ ಮೇಲಿಡುವನು. ಆ ಮೇಲೆ ಯಾರಹತ್ತಿರದಿಂದಲಾದರೂ ಒಂದು ಕೈಚೌಕ ಕೇಳಿ ತೆಗೆದುಕೊಂಡು, ಅದರ ಮೇಲೆ ಮುಚ್ಚಿ ಮಾಯಾ ಕೋಲಿನಿಂದ ಒನ್-ಟೂ-ತ್ರಿ ಎಂದು ಅದಕ್ಕೆ ತಾಕಿಸಿ, ಮುಚ್ಚಳ ತೆಗೆದರೆ ಅದರಲ್ಲಿ ಪೆಪ್ಪರಮೆಂಟ್, ಚಾಕಲೇಟ್ ಇರುತ್ತವೆ. ಅವುಗಳನ್ನೆಲ್ಲಾ ಪ್ರೇಕ್ಷಕರಿಗೆ ತೋರಿಸಿ. ಅಲ್ಲಿರುವ ಮಕ್ಕಳಿಗೆ ಹಂಚಿದರೆ, ಅವರು ತುಂಬಾ ಆನಂದದಿಂದ ಅವುಗಳನ್ನು ತಿನ್ನುತ್ತವೆ. ಮನೆಗೆ ಹೋಗಿ ಈ ವಿಷಯ ಸುತ್ತಮುತ್ತಲು ಇರುವ ತಮ್ಮ ಸ್ನೇಹಿತರಿಗೆ ಹೇಳುವರು. ಪ್ರಚಾರಕ್ಕೆ ಇದೊಂದು ಮುಖ್ಯ ಸಾಧನೆ. ಕೆಲಮಂದಿ ಗಾರುಡಿಯವರು ಈ ಟಿನ್ನಿನಮೇಲೆ ಒಂದಿಷ್ಟು ಅಕ್ಕಿಕಾಳು ಚೆಲ್ಲಿ, ಡಬ್ಬಿಯಿಂದ ಪುರಿ ತರಿಸುವುದೂ ಉಂಟು. ನಾನು ಇದೇ ರೀತಿ ಕೆಲ ಬಿಡಿ ಹೂಗಳನ್ನು ಎರಚಿ, ಟಿನ್ನಿನಿಂದ ಪೂಮಾಲೆ ತೆಗೆದು ತೋರಿಸಿ, ಅಲ್ಲಿ ಹಾಜರಾಗಿದ್ದ ಗಣ್ಯ ಮಹನೀಯರೊಬ್ಬರಿಗೆ ಹಾಕುತ್ತಿದ್ದೆ. ಇಂಥಹ ಯುಕ್ತಿ ಟೀಪಾರ್ಟಿ ಮುಂತಾದ ಸಮಾವೇಶಗಳಲ್ಲಿ ಪ್ರದರ್ಶಿಸಿದರೆ ಝೋಕಾಗಿರುತ್ತದೆ.

ಈಗ ಈಟ್ರಿಕ್ ಕುರಿತು ರಹಸ್ಯ ಹೇಳುವೆನು. ಇದೆಲ್ಲಾ ನಾವು ಸಿದ್ಧಪಡಿಸಿಟ್ಟುಕೊಳ್ಳುವ ಡಬ್ಬಿಯ ಆಧಾರದ ಮೇಲಿದೆ. ಮೊದಲನೇ ಚಿತ್ರದಲ್ಲಿ ತೋರಿಸಿದಂತೆ ಎರಡು ಕಡೆಯೂ ತೆರೆದಿರುವ ಕೊಳವಿಯೊಂದೂ, ಎರಡನೇ ಚಿತ್ರದಲ್ಲಿ ಸೂಚಿಸಿರುವಂತೆ ಎರಡುಕಡೆಯೂ ಮುಚ್ಚಳಅಳವಡಿಸಿರುವ ಎರಡು ಖಾನೆಯಿರುವ ಡಬ್ಬಿಯೊಂದನ್ನು ತಯಾರು ಮಾಡಿಕೊ.

ಈ ಡಬ್ಬಿಯನ್ನು ಮೊದಲನೇ ಚಿತ್ರದಲ್ಲಿ ತೋರಿಸಿರುವ ಕೊಳವೆಯಲ್ಲಿ ತೂರಿಸಿದರೆ ಅತಿ ಬಿಗಿಯಾಗಿಯೂ, ಅತಿ

ಸಡಿಲವಾಗಿಯೂ ಇರದೆ, ಎತ್ತ ಕಡೆ ಜರುಗಿಸಿದರೆ ಅತ್ತ ಕಡೆ ತುಂಬಾ ಸುಲಭವಾಗಿ ಸರಿಯುವಂತಿರಬೇಕು. ಎರಡನೇ ಚಿತ್ರದಲ್ಲಿರುವಪ್ರಕಾರ ತಯಾರಿಸಿದ ಡಬ್ಬಿಯಲ್ಲಿ ಎರಡು ಖಾನೆ ಜೋಡಿಸು. ಒಂದು ದೊಡ್ಡ ಖಾನೆ ಮತ್ತೊಂದು ಚಿಕ್ಕ ಖಾನೆ ಚಿಕ್ಕ ಖಾನೆಯಲ್ಲಿ ಪೆಪ್ಪರ ಮೆಂಟ್, ಚಾಕಲೇಟ್ ಹಾಕಿ ಸ್ವಲ್ಪವೂ ಜಾಗಖಾಲಿ ಬಿಡದೆ ಪೂರ್ತಿ ತುಂಬಿ ಮುಚ್ಚಳ ಹಾಕು. (ಡಬ್ಬಿಯನ್ನು ಗಟ್ಟಿಯಾಗಿ ಕುಲುಕಿಸಿದರೂ ಒಳಗಿರುವ ಪೆಪ್ಪರಮೆಂಟ್‌ಗಳು ಶಬ್ದವಾಗದಂತಿರಬೇಕು) ಈಗ ಎರಡನೇ ಡಬ್ಬಿಯನ್ನು ಮೊದಲು ತಯಾರು ಮಾಡಿಕೊಂಡಿದ್ದ ಕೊಳವೆಯಲ್ಲಿ ತೂರಿಸು. ಇಂಥಹ ಡಬ್ಬಿ ತಯಾರು ಮಾಡಿಕೊಂಡು ಸಭೆಗೆ ಬರಬೇಕು. ಮೂರನೇ ಚಿತ್ರದಲ್ಲಿ ಹೀಗೆ ತಯಾರಾದ ಡಬ್ಬಿಯನ್ನು ತೋರಿಸಲಾಗಿದೆ.

ಡಬ್ಬಿಯನ್ನು ಪ್ರೇಕ್ಷಕರಿಗೆ ತೋರಿಸುವಾಗ ಖಾಲಿಯಾಗಿರುವ ದೊಡ್ಡ ಖಾನೆ ಅವರ ಕಡೆ ಬರುವಂತೆ ಹಿಡಿದು ಕೊಳ್ಳಬೇಕು. ಪ್ರೇಕ್ಷಕರು ಚೆನ್ನಾಗಿ ಪರಿಶೀಲಿಸಿ ಡಬ್ಬಿ ಖಾಲಿಯಾಗಿರುವುದೆಂದೇ ನಂಬುವರು. ಇನ್ನೂ ಹೆಚ್ಚು ನಂಬಿಕೆಯುಂಟಾಗುವಂತೆ ಮಾಡಬೇಕೆಂದರೆ ಡಬ್ಬಿಯನ್ನು ತುಸ ಬಗ್ಗಿಸಿ, ಚೆನ್ನಾಗಿ ಕುಲುಕಿಸಿ ತೋರಿಸಬಹುದು. ನೀನು ಟೇಬಲಿನ ಹತ್ತಿರ ಬರುವ ವೇಳೆಗೆ ಒಂದು ಉಪಾಯ ಮಾಡಬೇಕು. ಪ್ರೇಕ್ಷಕರಿಗೆ ತೋರಿಸಿದ ದೊಡ್ಡ ಖಾನೆ ಇರುವಕಡೆಯನ್ನು ಕೊಳವಿಯೊಳಗೆ ತೂರಿಸು. ಈಗ ಡಬ್ಬಿಯನ್ನು ತಂದು ಮೇಜಿನಮೇಲೆ ಇಟ್ಟರೆ ಪೆಪ್ಪರಮೆಂಟ್ ಇರುವ ಖಾನೆ ಮೇಲೆ ಬರುವುದು. ಇದು ಹೇಗಿರಬೇಕೆಂಬುದನ್ನು ನಾಲ್ಕನೇ ಚಿತ್ರದಲ್ಲಿ ನೋಡು. ತರುವಾಯ ಪ್ರೇಕ್ಷಕನೊಬ್ಬನ ಹತ್ತಿರ ಕೈಚೌಕ ತೆಗೆದುಕೊಂಡು ಡಬ್ಬಿಯ ಮೇಲೆ ಮುಚ್ಚು. ಮಾಯಾ ಕೋಲನ್ನು ಅದರ ಮೇಲೆ ಮೂರು ಸಾರಿ ಮುಟ್ಟಿಸಿ, ಕೈಚೌಕ ತೆಗೆದು ಬಿಡು. ಡಬ್ಬಿಯ ಮುಚ್ಚಳ ತೆಗೆದು ಪೆಪ್ಪರಮಿಂಟ್, ಚಾಕಲೇಟ್ ಮಕ್ಕಳಿಗೆ ಹಂಚು.



1-ನೇ ಬೊಂಬೆ.



2-ನೇ ಬೊಂಬೆ.




3-ನೇ ಬೊಂಬೆ.




4-ನೇ ಬೊಂಬೆ.

ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷ್ ಭಾಷೆಯಲ್ಲಿರಬೇಕಾದುದು ಅಗತ್ಯ. ಅವರ ಪತ್ತೆ:

ಪ್ರೊಫೆಸರ್ ಪಿ. ಸಿ. ಸರ್ಕಾರ್,
ಮೆಜಿಷಿಯನ್
12/3/A, ಜಮಿರ್ ಲೇನ್, ಬಾಲಿಗಂಜ್
ಕಲಕತ್ತಾ–19

# ಬಣ್ಣ ಹಾಕಿ ನೋಡಿ 2-ನೇ ಚಿತ್ರದ ಕಥೆ

ಆಸ್ಥಾನ ವಿದ್ವಾಂಸನು ಮಾಂತ್ರಿಕನ ಗ್ರಂಥಾಗಾರವನ್ನೆಲ್ಲಾ ತುಂಬಾ ಸೂಕ್ಷ್ಮವಾಗಿ ಪರಿಶೀಲಿಸುತ್ತಾ ಹೋಗಲು ಕೊನೆಗೆ ಒಂದು ಗ್ರಂಥದಲ್ಲಿ ಗಿಣಿಯನ್ನು ಮನುಷ್ಯನನ್ನಾಗಿ ಬದಲಾಯಿಸುವ ವಿಧಾನ ವನ್ನು ಕುರಿತು ಈ ರೀತಿ ಪ್ರಸ್ತಾಪಮಾಡಿತ್ತು.

ಇಲ್ಲಿಗೆ ಈಶಾನ್ಯದಿಕ್ಕಿನಲ್ಲಿ ನೂರು ಯೋಜನಗಳ ದೂರ ಪ್ರಯಾಣ ಮಾಡಿದರೆ ಒಂದು ದೊಡ್ಡ ಪರ್ವತಶ್ರೇಣಿ ಬರುತ್ತದೆ. ಮತ್ತೆ ನೂರು ಯೋಜನಗಳು ದಾಟಿದರೆ ಒಂದು ಮಹಾ ಸಮುದ್ರ ಕಾಣುತ್ತದೆ. ಅದನ್ನೂ ದಾಟಿ ಆಚೆ ದಡದಲ್ಲಿರುವ ಕೀಕಾರಣ್ಯಗಳನ್ನು ದಾಟಿ ಮತ್ತೆ ಒಂದು ನೂರು ಯೋಜನ ಪ್ರಯಾಣ ಬೆಳೆಸಿದರೆ ಒಂದು ಮಂಜಿನ ಬೆಟ್ಟ ಕಾಣುವುದು. ಆ ಬೆಟ್ಟದಮೇಲೊಂದು ಭಾರಿ ಭವನ. ಆ ಭವನದಲ್ಲಿ ಮಹಾನುಭಾವನೊಬ್ಬನಿದ್ದಾನೆ. ಗಿಣಿಯನ್ನು ಮನುಷ್ಯನನ್ನಾಗಿ ಮಾಡಿಸುವ ರಹಸ್ಯ ಆತನಿಗೊಬ್ಬನಿಗೇ ಗೊತ್ತು. ಆತನು ಅಮಾವಾಸ್ಯೆಯ ದಿನ ಹೊರತು ಬೇರೊಂದು ದಿನ ಮಾತನಾಡುವುದಿಲ್ಲ.

ಈ ವಿವರಗಳನ್ನೆಲ್ಲಾ ಆಸ್ಥಾನ ವಿದ್ವಾಂಸನು ಮಹಾರಾಜನಿಗೆ ತಿಳಿಸಿ "ಇಷ್ಟೊಂದು ಕಷ್ಟ ಕರವಾದ ಕೆಲಸವನ್ನು ಮಾಡಲು ಸಾಮಾನ್ಯನ ಕೈಯಲ್ಲಿ ಸಾಧ್ಯವಿಲ್ಲ. ಪ್ರಾಣವನ್ನೂ ಸಹ ಲೆಕ್ಕ ಮಾಡದೆ ಪ್ರಯಾಣ ಮಾಡುವ ಸಾಹಸಿ ಬೇಕು." ಎಂದ. "ಅದೇನು ಮಹಾ! ದೇಶದೇಶಗಳಲ್ಲಿ ಈ ಸುದ್ದಿ ಸಾರೋಣ" ಎಂದ ರಾಜ. ಅದೇ ಪ್ರಕಾರ ಮಾಡಿದ. "ಈ ಕಾರ್ಯ ಮಾಡಿಕೊಂಡು ಬರುವವನಿಗೆ ಅರ್ಧ ರಾಜ್ಯವನ್ನು ಕೊಡುವುದೇ ಅಲ್ಲದೆ, ನನ್ನ ಮಗಳನ್ನೂ ಕೊಟ್ಟು ಮದುವೆ ಮಾಡುವೆ" ಎಂದ ರಾಜ. ಈ ವಿಷಯ ಕೇಳಿ ದೇಶ ದೇಶಗಳಿಂದ ಎಷ್ಟೆಷ್ಟೋ ವೀರರು, ಶೂರರು ಬಂದರು. ಆದರೆ ಈ ಭೀಕರವಾದ ವಿವರಗಳನ್ನು ಕೇಳಿ ಬೆನ್ನು ತಿರುಗಿಸಿ ಹೊರಟು ಹೋದರು.

ಕೊನೆಗೆ ಸಿಂಹಳ ದೇಶದ ರಾಜ ಕುಮಾರ ಸಿಂಹಬಲನು "ನಾನು ಸಾಧಿಸಿಕೊಂಡು ಬರು ವೇನು" ಎಂದು ಹೇಳಿದ. ವಿದ್ವಾಂಸನ ಆಶೀರ್ವಾದ ಪಡೆದು ಪ್ರಯಾಣ ಬೆಳೆಸಿದ. ನಾನಾ ಕಷ್ಟಗಳನ್ನು ಸಹಿಸಿ ಹೋಗುತ್ತಿದ್ದಾನೆ. ಪರ್ವತಶ್ರೇಣಿ ದಾಟಿದ. ಮಹಾಸಮುದ್ರವನ್ನೂ ದಾಟಿದ. ಕೀಕಾರಣ್ಯಗಳನ್ನೂ ದಾಟಿ ಒಂದು ನಿರ್ಜನ ಪ್ರದೇಶದಲ್ಲಿ ಹಾದು ಹೋಗುತ್ತಿದ್ದಾನೆ. ಹುಣ್ಣಿಮೆ, ಅಮಾವಾಸ್ಯೆಗಳು ಬರುತ್ತಿವೆ. ಹೋಗುತ್ತಿವೆ. ಇಷ್ಟಾದರೂ ಮಂಜಿನ ಬೆಟ್ಟ ಕಾಣಿಸ ಲಿಲ್ಲ. ಧೈರ್ಯ ಬಿಡದೆ ಹಾಗೇ ಹೋಗಿ ಹೋಗಿ ಹೇಗೋ ಮಂಜಿನ ಬೆಟ್ಟ ಸೇರಿಕೊಂಡ. ಬೆಟ್ಟದ ಮೇಲಿದ್ದ ಭವನವನ್ನು ನೋಡಿ ರಾಜಕುಮಾರ ಆನಂದ ಹೊಂದಿದ. ಆದರೆ ಮೇಘ ಮಂಡಲವನ್ನು ಮುಟ್ಟುತ್ತಿದ್ದ ಆ ಬೆಟ್ಟವನ್ನು ಹತ್ತುವುದು ಸುಮ್ಮನಾಯಿತೇ? ಅದೂ ಅಲ್ಲದೆ ಮರುದಿನವೇ ಅಮಾವಾಸ್ಯೆ. ಆ ಒಂದು ದಿನದಲ್ಲೇ ಭವನವನ್ನು ಸೇರಿ ಕೊಳ್ಳಬೇಕು. ಇಲ್ಲ, ಇಷ್ಟುದಿನ ಪಟ್ಟ ಶ್ರಮ ವ್ಯರ್ಥ ಆದಂತೆಯೇ ಸರಿ. ರಾಜಕುಮಾರ ಮಂಜಿನ ಬೆಟ್ಟ ಹತ್ತಲು ಉಪಕ್ರಮಿಸಿದ. ಪಾಪ, ನುಣ್ಣನೆಯ ಆ ಮಂಜಿನ ಗಡ್ಡೆಯಮೇಲೆ ಇಟ್ಟ ಹೆಜ್ಜೆ ಮುಂದಕ್ಕಿಡಲು ಅಸಾಧ್ಯವಾಗು ತಿತ್ತು. ಆದರೂ ಧೈರ್ಯ ವಹಿಸಿ ಹತ್ತುತ್ತಲಿದ್ದ. ಇಷ್ಟರಲ್ಲಿ ಅಮಾವಾಸ್ಯೆ ಬಂದಿತು. ಪಾಡ್ಯಮಿ ಗಳಿಗೆ ಬರುವ ಮುನ್ನ ಭವನವನ್ನು ಸೇರಬೇಕೆಂದು ರಾಜಕುಮಾರ ಮುಂದೆ ಮುಂದೆ ಸಾಗುತ್ತಿದ್ದ. ಇದೇ ಜೂಲೈ ತಿಂಗಳ ಚಿತ್ರ.




ಬಣ್ಣ ಹಾಕಿರಿ (ಕಥೆ) : 3-ನೆ ಬೊಂಬೆ

# ಯುಕ್ತಿ ಲೆಖ್ಖಗಳು!

**1.** ಒಂದರಿಂದ ಒಂಬತ್ತರವರೆಗಿನ ಸಂಖ್ಯೆಗಳನ್ನು ತೆಗೆದುಕೊಂಡು, ಒಂದೊಂದು ಸಂಖ್ಯೆಯನ್ನು ಒಂದೇ ಸಾರಿ ಉಪಯೋಗಿಸಿ, ಸಂಕಲನ ಮತ್ತು ಗುಣಾಕಾರಗಳಿಂದ ನೂರನ್ನು ಮಾಡಿ.

* * * * *

**2.** ಒಬ್ಬ ದರ್ಶಕನುಒಂದು ಸ್ಕೂಲಿನ ಉಪಾಧ್ಯಾಯನನ್ನು ಅವನ ಸ್ಕೂಲಿನಲ್ಲಿ ಒಟ್ಟು ಎಷ್ಟು ವಿದ್ಯಾರ್ಥಿಗಳಿದ್ದಾರೆಂದು ಕೇಳಿದನು. ಉಪಾಧ್ಯಾಯನ ಉತ್ತರ ಹೀಗಿತ್ತು!— "ಆರನೇ ಒಂಧು ಭಾಗ ಖಾಯಿಲೆ ಇಂದಿದ್ದಾರೆ, ಹನ್ನೊಂದು ಜನ ಕುಚೇಷ್ಟೆ ಮಾಡುತ್ತಿದ್ದಾರೆ, ಏಳು ಜನ ಜಾತ್ರೆಗೆ ಹೋಗಿದ್ದಾರೆ, ಇಲ್ಲಿ 37 ಜನ ಕೆಲಸ ಮಾಡುತ್ತಿದ್ದಾರೆ" ಹಾಗಾದರೆ ಅವನ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು.

* * * * *

**3.** ರಮು, ಸೀತಾ, ಮತ್ತು ಶಾರದ, ಮೂವರೂ ಒಂದು ದಿನ ತಮ್ಮ ಚಿಕ್ಕಮ್ಮನ ಮನೆಗೆ ಹೋದರು. ಅವರು ಮನೆಗೆ ಹಿಂತಿರುಗುವ ಸಮಯ ಬಂದಾಗ ಚಿಕ್ಕಮ್ಮನು ಒಂದು ಚೀಲ ಸೇಬನ್ನು ತೆಗೆದುಕೊಂಡು, ಅವರಿಗೆ ಹಂಚಿದಳು. ದೊಡ್ಡವಳಿಗೆ ಮಧ್ಯದವಳಿಗಿಂತ ಹೆಚ್ಚಾಗಿಯೂ, ಮಧ್ಯದವಳಿಗೆ ಕೊನೆಯವಳಿಗಿಂತ ಹೆಚ್ಚಾಗಿಯೂ ಬಂತು. ರಮಳಿಗೆ ಒಟ್ಟು ಸೇಬುಗಳ ಅರ್ಧ ಮತ್ತು ಒಂದು ಹಣ್ಣು, ಉಳಿದುದರ ಅರ್ಧ ಮತ್ತು ಒಂದು ಹಣ್ಣು ಸೀತಾಗೆ, ಮತ್ತು ಉಳಿದದ್ದರಲ್ಲಿ ಅರ್ಧ ಮತ್ತು ಒಂದು ಹಣ್ಣನ್ನು ಶಾರದಳಿಗೂ ಕೊಟ್ಟಳು. ಒಬ್ಬೊಬ್ಬರೂ ಎಷ್ಟೆಷ್ಟು ಪಡೆದರು?

---



ಇದಕ್ಕೆ 51 ನೇ ಪೇಜಿನಲ್ಲಿರುವ ಬೊಂಬೆ ಉತ್ತರ.

---

ಯುಕ್ತಿ ಲೆಖ್ಖಗಳಿಗೆ—ಉತ್ತರ:

1. $9\times8+7+6+5+4+3+2+1=100$
2. ವಿದ್ಯಾರ್ಥಿಗಳ ಸಂಖ್ಯೆ: 66
3. ರಮು: 8; ಸೀತ: 4; ಶಾರದ: 2.

Controlling Editor: SRI CHAKRAPANI
Printed and Published by B. NAGI REDDI, at the B. N. K. Press, Madras - 1

CHANDAMAMA (KANNADA) AUGUST 1951 REGD. No. M. 5210




ಬಣ್ಣ ಹಾಕಿರಿ (ಕಥೆ) 2-ನೆ ಬೊಂಬೆ